ಉಪನ್ಯಾಸಗ್ರಂಥಮಾಲೆ

೨




# ಮನೋರೋಗಗಳು

ಎನ್. ಆರ್. ಕುಲಕರ್ಣಿ





ವಿಶ್ವವಿದ್ಯಾಲಯ

ರವಾಡ

೧೯೫೪

# ಉಪನ್ಯಾಸಗ್ರಂಥಮಾಲೆ

## ಸಂಪಾದಕೀಯ ಮಂಡಲಿ

ಉಪನ್ಯಾಸಗ್ರಂಥಮಾಲೆ

೨

# ಮನೋರೋಗಗಳು

ಎನ್. ಆರ್. ಕುಲಕರ್ಣಿ,
ಎಂ. ಎ., ಎಲ್‌ಎಲ್. ಬಿ.





ಕರ್ನಾಟಕ ವಿಶ್ವವಿದ್ಯಾಲಯ
ಧಾ ರ ವಾ ಡ
೧೯೫೪

ಪ್ರಕಾಶಕರು :

ಎಂ. ಎಸ್. ಬಗಲಿ, ಬಿ.ಎ., ಎಲ್‌ಎಲ್.ಬಿ.

ರೆಜಿಸ್ಟ್ರಾರ್

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಮೊದಲನೆಯ ಮುದ್ರಣ

೨೦೦೦ ಪ್ರತಿಗಳು



ಮುದ್ರಕರು :

ಆರ್. ಟಿ. ಬಿಳಗಿ

ಲಿಂಗರಾಜ ಆರ್ಟ ಪ್ರೆಸ್ (ನಂ. ೨೨೦)

ಮಾಳಮಡ್ಡಿ, ಧಾರವಾಡ

# ಮಾಲೆಯ ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಸಮಿತಿ ಸಿದ್ಧಪಡಿಸಿದ ಯೋಜನೆಯ ಮೇರೆಗೆ ಮೊದಲನೆಯ ಉಪನ್ಯಾಸಮಾಲೆ ೧೯೫೨ನೆಯ ನವೆಂಬರ್ ತಿಂಗಳಲ್ಲಿ ಗದಗಿನಲ್ಲಿ ನೆರವೇರಿತು. ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಉಪನ್ಯಾಸಗಳನ್ನು ಕನ್ನಡದಲ್ಲಿ ಕೊಟ್ಟರು. ವಿಶ್ವವಿದ್ಯಾಲಯದ ಜ್ಞಾನಭಂಡಾರವನ್ನು ಕಾಲೇಜು ತರಗತಿಗಳಿಗೇ ಮೀಸಲಾಗಿ ಇಡದೆ ಅದರ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆತುವು. ಅಂದು ಗದಗಿನಲ್ಲಿ ಪ್ರಾರಂಭಿಸಿದ ಉಪನ್ಯಾಸಮಾಲೆ ಈಚೆಗೆ ಉತ್ತರಕರ್ನಾಟಕದ ಹಲವು ಊರುಗಳಲ್ಲಿ ನಡೆದಿದೆ, ಮುಂದೆಯೂ ನಡೆಯಲಿದೆ. ಇದು ನಮ್ಮ ವಿಶ್ವವಿದ್ಯಾಲಯದ ಪ್ರತಿ ತಿಂಗಳ ಕಾರ್ಯಕ್ರಮವಾಗಿ ಪರಿಣಮಿಸಿದೆ.

ಇಂಥ ಉಪನ್ಯಾಸಗಳನ್ನು ವಿದ್ವಾಂಸರ ಮುಖದಿಂದ ಪ್ರತ್ಯಕ್ಷವಾಗಿ ಕೇಳುವ ಜನರಿಗೆ ಆಸಕ್ತಿಯೂ ತಿಳಿವಳಿಕೆಯೂ

ಹೆಚ್ಚುವುದು ಸಹಜ. ಆದರೆ ಉಪನ್ಯಾಸದ ಮಾತು ಕೇಳಿದ ಕಿವಿಯಲ್ಲೇ ಕರಗಿ ಹೋಗುತ್ತದೆ; ಕೆಲವು ಕಾಲ ಕಳೆದಬಳಿಕ, ಉಪನ್ಯಾಸದ ವಿವರಗಳನ್ನು ನೆನಪಿಗೆ ತಂದುಕೊಳ್ಳುವುದು ಸಭೆಯಲ್ಲಿದ್ದವರಿಗೇ ಅಶಕ್ಯವಾಗುತ್ತದೆ. ಬೇರೆ ಊರಿನವ ರಂತೂ ಇವುಗಳ ಲಾಭವನ್ನು ಪಡೆಯುವಹಾಗೆಯೇ ಇಲ್ಲ. ಆದಕಾರಣ ಉಪನ್ಯಾಸಗಳನ್ನು ಕೊಡಿಸಿದಷ್ಟಕ್ಕೇ ತೃಪ್ತಿ ಗೊಳ್ಳದೆ, ಇವುಗಳಲ್ಲಿ ಕೆಲವನ್ನಾದರೂ ಗ್ರಂಥರೂಪದಲ್ಲಿ ಬರೆ ಯಿಸಿ, ಸುಲಭವಾದ ಬೆಲೆಗೆ ಪ್ರಕಟಿಸಿ, ಕನ್ನಡ ಜನದಲ್ಲೆಲ್ಲ ಹರಡಬೇಕೆಂಬ ಸೂಚನೆ ಸಹಜವಾಗಿಯೇ ಬಂದಿತು. ಇದನ್ನು ವಿಶ್ವವಿದ್ಯಾಲಯದ ಪ್ರಕಟನ ಸಮಿತಿ ಉತ್ಸಾಹದಿಂದ ಅಂಗೀ ಕರಿಸಿತು. ಈ ಬಗೆಯ ಪ್ರಯತ್ನ ಮೈಸೂರು ವಿಶ್ವವಿದ್ಯಾ ನಿಲಯದಲ್ಲಿ ಹಿಂದೆಯೇ ನಡೆದು ಇಂಥದೊಂದು ಗ್ರಂಥಮಾಲೆ ಅಲ್ಲಿ ಜನಪ್ರಿಯವಾಗಿ ಪರಿಣಮಿಸಿದ ಸಂಗತಿ ನಮ್ಮ ಸಂಕಲ್ಪಕ್ಕೆ ಮತ್ತಷ್ಟು ಹುರುಪನ್ನು ಕೊಟ್ಟಿತು. ಹೀಗೆ ನಮ್ಮ ವಿಶ್ವವಿದ್ಯಾ ಲಯದ ಜನತಾಶಿಕ್ಷಣಕಾರ್ಯವು ಈ ‘ ಉಪನ್ಯಾಸ ಗ್ರಂಥ ಮಾಲೆ ’ ಯ ಮೂಲಕ ಇನ್ನೊಂದು ಹೆಜ್ಜೆಯನ್ನು ಮುಂದಕ್ಕೆ ಇರಿಸಿದೆ.

ನಮ್ಮ ಪ್ರಾರ್ಥನೆಗೆ ಮನ್ನಣೆಕೊಟ್ಟು, ಪ್ರತಿಫಲದ ಅಪೇಕ್ಷೆ ಇಲ್ಲದೆಯೆ, ಉಪನ್ಯಾಸಕರು ಪುಸ್ತಕಗಳನ್ನು ಬರೆದು ಕೊಡುತ್ತಿರುವುದು ಶ್ಲಾಘ್ಯವಾದ ವಿಷಯ; ಇದಕ್ಕಾಗಿ ಈ ಲೇಖಕ ಮಹಾಶಯರಿಗೆ ವಿಶ್ವವಿದ್ಯಾಲಯದ ವಂದನೆಗಳನ್ನು ಸಂತೋಷದಿಂದ ಸಲ್ಲಿಸುತ್ತೇನೆ. ಈ ‘ ಉಪನ್ಯಾಸ ಗ್ರಂಥ

ಮಾಲೆ ’ ಕನ್ನಡಿಗರ ಪ್ರೀತಿಗೆ ಪಾತ್ರವಾಗಲೆಂದೂ ಇದರ ಪ್ರಕಾಶನದಿಂದ ನಮ್ಮ ಜನತೆಯ ಜ್ಞಾನಾಸಕ್ತಿ ಪುಷ್ಟಿಗೊಳ್ಳಲೆಂದೂ ಹಾರೈಸುತ್ತೇನೆ.

ಸಿ. ಸಿ. ಹುಲಕೋಟಿ
ವೈಸ್-ಛಾನ್ಸೆಲರ್
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೧೬-೬-೧೯೫೪

# ಲೇಖಕನ ಬಿನ್ನಹ

ಜಗತ್ತಿನೊಳಗೆ ಇಂದು ಮುಂದುವರಿದಿರುವ ಭಾಷೆಗಳೊಳಗೆ ಸಾಮಾನ್ಯ ಜನರಿಗೂ ಕೂಡ ಸುಲಭವಾಗಿ ಸಿಕ್ಕುವಂತಿರುವ ಜ್ಞಾನಭಂಡಾರದ ವ್ಯಾಪ್ತಿಯನ್ನು ನೋಡಿದರೆ, ಇಂತಹ ಪವಿತ್ರತಮವಾದ ಜ್ಞಾನವು ನಮ್ಮ ಕರ್ನಾಟಕದ ಹಳ್ಳಿಯ ಬಂಧುಗಳಿಗೆ ಅವರ ಮನೆಯಲ್ಲಿಯೇ ಎಂದು ಸಿಕ್ಕುವಂತಾಗುವುದೋ ಎಂದು ಮನಸ್ಸಿಗೆ ಕಳವಳವುಂಟಾಗುವಂತಿದೆ ಇಂದಿನ ಸ್ಥಿತಿ. ಅದು ದೂರವಾಗಬೇಕಾದರೆ ಸುಶಿಕ್ಷಿತರಾದವರು ಎಲ್ಲ ತರದ ಸಂಸ್ಥೆಗಳ ಮುಖಾಂತರವಾಗಿ ಈ ಕೆಲಸಕ್ಕಾಗಿ ಟೊಂಕ ಕಟ್ಟಿ ಪ್ರತಿಜ್ಞೆ ಮಾಡಿ ಮುಂದುವರಿಯಬೇಕು. ಅದರೊಳಗೂ ಕರ್ನಾಟಕ ವಿಶ್ವವಿದ್ಯಾಲಯದ ಉಪ್ಪನ್ನುಣ್ಣುವ ಪ್ರತಿಯೊಬ್ಬ ಪದವೀಧರನೂ ಕನ್ನಡ ಮಾತೆಯ ಸೇವೆಗಾಗಿ ಬದ್ಧಕಂಕಣನಾಗಲೇ ಬೇಕು. ತಾನು ಪ್ರಯತ್ನಪೂರ್ವಕವಾಗಿ ಅಭ್ಯಾಸ ಮಾಡಿ ಕೈವಶಮಾಡಿಕೊಂಡಿರುವ ಜ್ಞಾನವಿಭಾಗದ ರಹಸ್ಯಗಳನ್ನೆಲ್ಲ ಅಜ್ಞಾನದೊಳಗಿರುವ ತನ್ನ ಬಂಧುಗಳಿಗೆ ಸರಲ ಕನ್ನಡದಲ್ಲಿ ತಿಳಿಸಿಕೊಡುವುದೇ ತನ್ನ ಕರ್ತವ್ಯವಾಗಿದೆಯೆಂಬ ಅರಿವು ಅವನಲ್ಲಿ ಹುಟ್ಟಬೇಕು. ಹೀಗಾದರೆ ಮಾತ್ರ ಅಜ್ಞಾನವೆಂಬ ಶತ್ರುವನ್ನು ನಾವು ಕರ್ನಾಟಕದೊಳಗಿನಿಂದ ಸುಲಭವಾಗಿ ಹೊಡೆದೋಡಿಸಬಹುದು.

ಶಾಂತಿ ಸುಖಗಳನ್ನು ಅಪೇಕ್ಷಿಸುವವರು ಮನಸ್ಸಿನ ಮಂಗಚೇಷ್ಟೆಯ ರಹಸ್ಯಗಳನ್ನು ಅರಿತುಕೊಳ್ಳಲೇಬೇಕು. ಅದರ ಸರಿಯಾದ ಜ್ಞಾನವಾದ ವಿನಾ ಮಾನವನ ಜ್ಞಾನವು ಸಂಪೂರ್ಣವೆಂದೆನಿಸಿಕೊಳ್ಳಲಾರದು. ಆದರೆ ಮನಸ್ಸಾದರೋ ಎಂದೆಂದಿಗೂ ತೆರೆಯ ಮರೆಯಲ್ಲಿಯೇ ಕುಳಿತು, ನಮ್ಮನ್ನು ಮಾತ್ರ ಹೇಗೆ ಬೇಕೋ ಹಾಗೆ ಕುಣಿಸುತ್ತಿರುವ ವಸ್ತುವಾಗಿದೆ. ಅದರ ಒಗಟುಗಳನ್ನು ಬಿಡಿಸುವ ಕೆಲಸವು ಎಂದಿನಿಂದಲೂ ನಡೆದೇ ಇದೆ. ಕಳೆದ ಕೆಲವು ವರುಷಗಳಲ್ಲಿಯಂತೂ ವಿಚಾರವಂತರನೇಕರು ಇದರ ಬಗೆಗೆ ಹೆಚ್ಚಾಗಿ ಶೋಧ ಮಾಡಲುಪಕ್ರಮಿಸಿದ್ದಾರೆ. ಅವರ ಅನೇಕ ಮುಖವಾದ ಅಭ್ಯಾಸದ ಒಂದು ಪ್ರಮುಖ ಅಂಗವನ್ನು ಈ ಚಿಕ್ಕ ಹೊತ್ತಗೆಯಲ್ಲಿ ಕೊಡುವ ಪ್ರಯತ್ನ ಮಾಡಿದ್ದೇನೆ. ಸಹೃದಯರಾದ ವಾಚಕರು ಅದಕ್ಕೆ ಸ್ವಾಗತವನ್ನೀಯುವರೆಂದು ನಂಬಿದ್ದೇನೆ.

ಕರ್ನಾಟಕ ವಿಶ್ವವಿದ್ಯಾಲಯದವರು ಜಮಖಂಡಿಯಲ್ಲಿ ದಿನಾಂಕ ೭-೨-೧೯೫೩ ರಂದು ಏರ್ಪಡಿಸಿದ ವ್ಯಾಸಂಗವಿಸ್ತರಣ ಸಮಿತಿಯ ಉಪನ್ಯಾಸಕಾರರಲ್ಲಿ ಒಬ್ಬನಾಗಿದ್ದ ನಾನು ಇದೇ ವಿಷಯದಮೇಲೆ ಮಾಡಿದ ಭಾಷಣದ ಆಧಾರದಿಂದ ಈ ಪುಸ್ತಕವನ್ನು ಬರೆಯಲಾಗಿದೆ. ಅಲ್ಲಿ ಭಾಷಣಮಾಡುವುದಕ್ಕೆ ಆಸ್ಪದ ಕೊಟ್ಟುದಲ್ಲದೆ ಈ ಪುಸ್ತಕವನ್ನು ಅಚ್ಚುಹಾಕಿಸಿ ಪ್ರಕಟಿಸಿದ್ದಕ್ಕಾಗಿ ನಾನು ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ತುಂಬಾ ಋಣಿಯಾಗಿರುವೆನೆಂದು ಬೇರೆ ಹೇಳಲಿಕ್ಕೆ ಬೇಡ.

ಧಾರವಾಡ<br>
೨೯-೫-೧೯೫೪ } ಎನ್. ಆರ್. ಕುಲಕರ್ಣಿ

# ವಿಷಯಸೂಚಿಕೆ

# ಮನೋರೋಗಗಳು

## ೧. ಅಭ್ಯಾಸದ ಆವಶ್ಯಕತೆ

ಮನೋರೋಗಗಳ ಶಾಸ್ತ್ರೀಯವಾದ, ಸುವ್ಯವಸ್ಥಿತವಾದ ಅಭ್ಯಾಸವು ಸಮಾಜಸ್ವಾಸ್ಥ್ಯಕ್ಕೆ ಬಹಳ ಅಗತ್ಯದ್ದಾಗಿದೆ. ಅದರ ಮಹತ್ವವು ನಮ್ಮ ಜನರಿಗೆ ಇನ್ನೂ ಸರಿಯಾಗಿ ಗೊತ್ತಾಗದಿರುವುದು ದುರ್ದೈವದ ಮಾತು. ಇಂದು ಸಮಾಜದಲ್ಲಿ ನಡೆದಿರುವ ಅನೇಕ ಅನಾಹುತಗಳಿಗೆ ಮನೋರೋಗಗಳನ್ನು ಕುರಿತು ನಮ್ಮಲ್ಲಿರುವ ಅಜ್ಞಾನವೂ ಒಂದು ಮುಖ್ಯವಾದ ಕಾರಣವಾಗಿದೆ. ಅಪರಾಧಗಳು ಎಷ್ಟೋ ಸಲ ಮನೋರೋಗಗಳ ಫಲವೇ ಆಗಿರುತ್ತವೆ. ಶಿಕ್ಷಣಕ್ಷೇತ್ರದಲ್ಲಿ ಅನೇಕ ತೊಡಕಿನ ಪ್ರಶ್ನೆಗಳಿಗೂ ಮನೋರೋಗಗಳೇ ಮೂಲವಾಗಿರುತ್ತವೆ. ಸಾಮಾಜಿಕ, ಕೌಟುಂಬಿಕ ಮತ್ತು ವೈಯಕ್ತಿಕ ಜೀವನದಲ್ಲಿಯಂತೂ ಇವುಗಳ ಹಾವಳಿಯನ್ನು ವರ್ಣಿಸಲು ಶಕ್ಯವಿಲ್ಲ. ಆರೋಗ್ಯಶಾಸ್ತ್ರದಲ್ಲಿ ಈಗ ಅವುಗಳನ್ನು ಮರೆತರೆ ನಡೆಯುವಂತಿಲ್ಲ. ಹೀಗೆ ಇಂದಿನ ನಾಗರಿಕ ಜೀವನಕ್ಕೆ ಅತ್ಯಾವಶ್ಯಕವಾದ ವಿಷಯದ ಕಡೆಗೆ ಎಲ್ಲರ ಗಮನವನ್ನು ಸೆಳೆಯುವುದಕ್ಕಾಗಿ ಈ ಪ್ರಯತ್ನವನ್ನು ಮಾಡಿದ್ದಾಗಿದೆ.

"ಈ ಕಾಲದಲ್ಲಿ ಮಾನವ ಜೀವದ ಸರಿಯಾದ ಜ್ಞಾನ ಮಾಡಿಕೊಳ್ಳಲಿಕ್ಕೆ ಮನೋರೋಗಶಾಸ್ತ್ರವು ಒಂದೇ ಒಂದಾದ ಮಹತ್ವದ ಸಾಧನವೆಂದೆನಿಸಿಕೊಳ್ಳದಿದ್ದರೂ, ಅದೂ ಒಂದು ಮಹತ್ವದ ಸಾಧನವಾಗಿದೆಯೆಂಬಲ್ಲಿ ಯಾವ ಸಂದೇಹವೂ ಇಲ್ಲ" ಎಂದು ಬ್ಲಾಯ್‌ಲರ್ ಎಂಬ ಪಂಡಿತನು ಅಭಿಪ್ರಾಯ ಪಡುತ್ತಾನೆ. ಎಂದರೆ ನೀರೋಗಿಯಾಗಿರುವ ಮನಸ್ಸಿನ ಜ್ಞಾನಕ್ಕೂ ಮನೋರೋಗಶಾಸ್ತ್ರವು ಸಹಾಯಕವಾಗಿರುವುದೆಂದು ಹೇಳಬಹುದು. "ಜ್ಞಾನವೇ ಬಲ"ವೆಂಬ ಉಕ್ತಿಯು ಪ್ರಸಿದ್ಧವಾಗಿದೆ. ವಸ್ತುಗಳ ಸರಿಯಾದ ತಿಳಿವಳಿಕೆಯು ಯಾವನಿಗಿರುವುದೋ ಅವನು ಆ ವಸ್ತುಗಳ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳಬಲ್ಲನೆಂಬುದು ಸ್ಪಷ್ಟವಾಗಿದೆ. ಆದುದರಿಂದ, ಮನೋರೋಗಗಳೆಂದರೆ ಏನು, ಅವು ಹೇಗೆ ಹುಟ್ಟುತ್ತವೆ, ಹೇಗೆ ಬೆಳೆಯುತ್ತವೆ, ಅವುಗಳಿಂದಾಗುವ ಅನರ್ಥಗಳೇನು—ಎಂಬಿವೇ ಮೊದಲಾದ ಸಂಗತಿಗಳು ನಮಗೆ ಗೊತ್ತಾದರೆ, ಮನಸ್ಸಿನ ಮೇಲೆ ನಾವು ಯಾವ ರೀತಿಯಿಂದ ಹತೋಟಿಯನ್ನಿಟ್ಟುಕೊಳ್ಳಬಹುದೆಂಬುದು ಗೊತ್ತಾಗುತ್ತದೆ. ಮನೋರೋಗಗಳು ನಮಗೆ ಅಂಟಿಕೊಳ್ಳದಂತೆ ಹೇಗೆ ಎಚ್ಚರಿಕೆ ಪಡಬೇಕೆಂಬುದು ತಿಳಿಯುತ್ತದೆ; ಒಂದು ವೇಳೆ ಅವು ನಮ್ಮಲ್ಲಿ ತಪ್ಪಿ ಸೇರಿಕೊಂಡರೂ, ಅವುಗಳಿಂದ ನಾವು ಹೇಗೆ ಬಿಡುಗಡೆ ಹೊಂದಬೇಕೆಂಬುದೂ ಸ್ಪಷ್ಟವಾಗುತ್ತದೆ. ಹೀಗೆ ಮನೋರೋಗಗಳಿಂದ ಸ್ವಂತವಾಗಿ ದೂರವಾಗಿರುವುದೂ ಬಿಡುಗಡೆ ಹೊಂದುವುದೂ ಈ ಅಭ್ಯಾಸದಿಂದಾಗುವ ಮೊದಲನೆಯ

ಲಾಭವೆಂದು ಹೇಳಬಹುದು.

ಮನೋರೋಗಗಳ ಅಭ್ಯಾಸದ ಎರಡನೆಯ ಹಿರಿದಾದ ಲಾಭವೆಂದರೆ, ಅವುಗಳಿಂದ ಬಳಲುತ್ತಿರುವ ಜನರಿಗೆ ಸ್ವಲ್ಪವಾದರೂ ಸಹಾಯಮಾಡಲು ಶಕ್ತನಾಗುವುದು. ಮನೋರೋಗಿಗಳನ್ನು ಕುರಿತು ನಮ್ಮಲ್ಲಿ ಸಾಮಾನ್ಯವಾಗಿ ಬಹಳ ತಪ್ಪಾದ ಭಾವನೆಗಳಿರುತ್ತವೆ. ಮನೋರೋಗಿಗಳು ಪಾತಕಿಗಳೆಂದೂ ನೀತಿಬಾಹಿರರೆಂದೂ ಸಮಾಜದಲ್ಲಿ ಇರಲಿಕ್ಕೆ ಅನರ್ಹರೆಂದೂ ನಾವು ಅವರನ್ನು ಕಡೆಗಣಿಸುತ್ತೇವೆ. ಅವರನ್ನು ನೋಡುವ ನಮ್ಮ ದೃಷ್ಟಿಯು ಅನ್ಯಾಯದ್ದಾಗಿದೆ. ಅವರಿಗಾಗುತ್ತಿರುವ ಕಷ್ಟವು ಅವರ ಪಾಪಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವೆಂದು ಬಗೆದು ನಾವು ಉದಾಸೀನರಾಗಿರುತ್ತೇವೆ. ಕೆಲವು ಜನರಂತೂ ದುರ್ದೈವಿಗಳಾದ ಮನೋರೋಗಿಗಳ ಸಮೀಪದಲ್ಲಿ ಕೂಡ ಸುಳಿಯಲು ಅಂಜುತ್ತಾರೆ. ದೆವ್ವ, ಭೂತ, ಪ್ರೇತ, ಪಿಶಾಚಿಗಳಿಂದ ಅವರು ಗ್ರಸ್ತರಾಗಿರುವರೆಂದೂ, ಅವರ ಉಸಾಬರಿಗೆ ಹೋದರೆ ಅವು ತಮಗೂ ಬಡಿದುಕೊಳ್ಳಬಹುದೆಂದೂ ಅವರು ಹೆದರುತ್ತಾರೆ. ಮನೋರೋಗಿಗಳ ಆಪ್ತೇಷ್ಟರು ಮಂತ್ರಜ್ಞರೆಂದೆನಿಸಿಕೊಳ್ಳುವ ಠಕ್ಕರಾದ ದುರ್ಜನರ ಸೆಳವಿಗೆ ಅನೇಕ ಸಲ ಸಿಕ್ಕಿ, ರೋಗಿಗಳ ದುಃಖವನ್ನು ಹೆಚ್ಚಿಸುವುದಲ್ಲದೆ ಹಣವನ್ನೂ ಕಳೆದುಕೊಳ್ಳುತ್ತಾರೆ. ಆದರೆ ಈ ಭಾವನೆಯು ತೀರ ತಪ್ಪಾದುದು. ಅನೇಕ ಬಗೆಯ ಕಾಹಿಲೆಗಳಿಂದ ಬಳಲುತ್ತಿರುವ ಜನರನ್ನು ನಾವು ಸಹಾನುಭೂತಿಯಿಂದ ಕಂಡು ಅವರಿಗೆ ಸಹಾಯ ಮಾಡಿ ಉಪಚರಿಸುವಂತೆ, ಮನೋರೋಗಿಗಳ

ಬಗೆಗೂ ನಮ್ಮ ನಡೆವಳಿಕೆಯು ಬದಲಾವಣೆ ಹೊಂದಬೇಕಾಗಿದೆ. ಮನೋರೋಗಿಗಳನ್ನು ಪ್ರೇಮ ದಯೆ ಕಾರುಣ್ಯಗಳಿಂದ ಕಾಣುವುದು ಆವಶ್ಯಕವಾಗಿದೆ. ಅದೇ ಪ್ರಾರಂಭವಾಗಿರುವ ಮನೋರೋಗಗಳು ತುಸು ಪ್ರೇಮ, ಮಮತೆ ಮತ್ತು ಎಚ್ಚರಿಕೆಗಳಿಂದ ಸಹಜವಾಗಿ ದೂರವಾಗುವಂತಿರುತ್ತವೆ. ಅವೇ ಸುತ್ತಲಿನ ಜನರ ತಪ್ಪಿನಿಂದ ಮುಂದೆ ಅಸಾಧ್ಯವಾಗಿ ಪರಿಣಮಿಸುತ್ತವೆ.

ಪ್ರಸ್ತುತಕಾಲದಲ್ಲಿ ಮನೋರೋಗಗಳ ಅಭ್ಯಾಸ ಬೆಳೆಸುವುದಕ್ಕೆ ಇನ್ನೂ ಒಂದು ಪ್ರಬಲವಾದ ಕಾರಣವಿದೆ. ಇಂದಿನದು ನಾಗರಿಕತೆಯ ಕಾಲ. ಮಾನವ ನಾಗರಿಕತೆಯು ಪ್ರಾರಂಭವಾಗಿ ಸುಮಾರು ಆರು ಸಾವಿರ ವರುಷಗಳಾದುವು. ನಾಗರಿಕತೆಯ ಮುಖ್ಯ ಲಕ್ಷಣವೆಂದರೆ ಸಂಘಜೀವನದ ಪರಮೋತ್ಕರ್ಷ. ಸಂಸ್ಕೃತಿಯೆಂದರೆ ಸಮಾಜದ ವ್ಯಕ್ತಿಗಳೆಲ್ಲ ಒಂದಾಗಿ ಬೆರೆತು ತಮ್ಮ ಜೀವನವನ್ನು ಅರಳಿಸಿಕೊಳ್ಳುವುದು. ಆದರೆ ಮಾನವ ವ್ಯಕ್ತಿಯು ಹುಟ್ಟುವುದು ಸ್ವಾರ್ಥಿಯಾಗಿ. ಅವನಲ್ಲಿ ನಾಗರಿಕ ಜೀವನಕ್ಕೆ ಬೇಕಾಗುವ ಸಲಕರಣೆಗಳು ಬೀಜರೂಪದಿಂದ ಇದ್ದರೂ, ಅವು ತಾವಾಗಿ ಸಹಜವಾಗಿ ಸುಲಭವಾಗಿ ಬೆಳೆದುಬರಲಾರವು. ಮಾನವ ವ್ಯಕ್ತಿಯ ಸ್ವಾರ್ಥ ಪ್ರವೃತ್ತಿಗಳನ್ನು ಸಮಾಜದ ಹಿತ ಕಲ್ಯಾಣಗಳಿಗೆ ಹೊಂದಿಕೆಯಾಗುವಂತೆ ಮಾರ್ಪಾಡುಗೊಳಿಸುವುದೇ ನಾಗರಿಕ ಶಿಕ್ಷಣದ ಧ್ಯೇಯವಾಗಿದೆ. ಎಂದರೆ ಮಾನವನು ನಾಗರಿಕನಾಗಬೇಕಾದರೆ ತನ್ನ ವೈಯಕ್ತಿಕವಾದ ಸಹಜ ಪ್ರವೃತ್ತಿಗಳನ್ನು ಹತ್ತಿಕ್ಕಲಿಕ್ಕೆ ಕಲಿಯಬೇಕಾಗುವುದು. ಸಹಜ

ಪ್ರವೃತ್ತಿಗಳಿಗೆ ನೈಸರ್ಗಿಕವಾಗಿ ಬೇಕಾದ ಅವಕಾಶವು ಸಿಕ್ಕದಂತಾದೊಡನೆ, ಅಸಂತೋಷವುಂಟಾಗುವುದು ಅಪರಿಹಾರ್ಯವಾಗಿದೆ. ನಾಲ್ಕು ಜನರೊಡನೆ ಕೂಡಿಕೊಂಡು ನಡೆಯಬೇಕೆಂದರೆ ನಮ್ಮಲ್ಲಿಯ ಪ್ರವೃತ್ತಿಗಳನ್ನು ದಮನ ಮಾಡಲೇಬೇಕಾಗುವುದು. ಇದರ ಅರ್ಥವೇನೆಂದರೆ, ಹೆಚ್ಚುಹೆಚ್ಚು ನಾಗರಿಕನಾಗುವುದೆಂದರೆ ಇಂದ್ರಿಯ ನಿಗ್ರಹವನ್ನು ಹೆಚ್ಚುಹೆಚ್ಚಾಗಿ ಮಾಡುವುದು. ಇಂದ್ರಿಯ ನಿಗ್ರಹವು ಬೆಳೆಯುತ್ತ ಹೋದಂತೆ ಮನಸ್ಸಿನ ಅಸಂತೋಷವೂ ಬೆಳೆಯಹತ್ತುವುದು. ಆದುದರಿಂದ "ಮನುಷ್ಯನು ಸುಧಾರಿಸುತ್ತ ಹೋಗುವುದೆಂದರೆ ಹೆಚ್ಚುಹೆಚ್ಚು ಅಸಂತುಷ್ಟನಾಗುತ್ತ ಹೋಗುವುದೇ ಸರಿ" ಎಂದು ಫ್ರಾಯ್‌ಡ್ ಎಂಬ ಮನೋವಿಶ್ಲೇಷಣಶಾಸ್ತ್ರಜ್ಞನು ಸಾರಾಂಶ ತೆಗೆದಿದ್ದಾನೆ. ಸುಧಾರಣೆಯ ಬೆಲೆಯೆಂದರೆ ಅಸಂತೋಷ ಎಂದು ಅವನು ಹೇಳುತ್ತಾನೆ. ಸಹಜ ಪ್ರವೃತ್ತಿಗಳ ದಮನದಲ್ಲಿಯೇ ಮನೋರೋಗಗಳ ಉಗಮವಿರುವುದೆಂದು ಇಂದಿನ ಮಾನಸಶಾಸ್ತ್ರಜ್ಞರು ನಿರ್ಣಯಿಸಿದ್ದಾರೆ. ಇಷ್ಟೇ ಅಲ್ಲ; ಇದು ಬರಿಯ ತಾತ್ತ್ವಿಕವಾದ ಮಾತಾಗಿರದೆ ಸತ್ಯಸಂಗತಿಗಳೂ ಇದನ್ನು ಪ್ರಮಾಣೀಕರಿಸುತ್ತವೆಂದು ಫ್ರಾಯ್‌ಡನು ಹೇಳುತ್ತಾನೆ. ಹೆಚ್ಚುಕಡಿಮೆ ಸುಧಾರಿಸಿರುವ ರಾಷ್ಟ್ರಗಳ ಒಂದು ಮಾಲಿಕೆಯನ್ನು ಮಾಡಿ, ಅವುಗಳಲ್ಲಿರುವ ಮನೋರೋಗಗಳ ಸಂಖ್ಯೆಯನ್ನು ನಿಚ್ಚಣಿಕೆಯ ಕ್ರಮದಲ್ಲಿ ಸೇರಿಸಿ ನೋಡಬಹುದು. ಹೀಗೆ ಮಾಡಿದರೆ, ಆಯಾ ರಾಷ್ಟ್ರಗಳೊಳಗಿನ ಮನೋರೋಗಿಗಳ ಸಂಖ್ಯೆಯು ಅವುಗಳ ಸುಧಾರಣೆಯ ಮಟ್ಟಕ್ಕೆ ತಕ್ಕಂತೆ

ಏರುತ್ತಲೂ ಇಳಿಯುತ್ತಲೂ ಹೋಗುವುದೆಂದು ಅವನು ತೋರಿಸಿಕೊಟ್ಟಿದ್ದಾನೆ. ಈ ಮಾತು ಸತ್ಯವಾಗಿದ್ದರೆ, ಸುಧಾರಣೆಯ ದಾರಿಯ ಮೇಲಿರುವ ರಾಷ್ಟ್ರಗಳು ತಮ್ಮ ಜನರೊಳಗೆ ಮನೋರೋಗಗಳ ಪ್ರಸಾರವಾಗದಂತೆ ಎಚ್ಚರಿಕೆ ವಹಿಸಬೇಕಾದುದು ಅಗತ್ಯ.

ಇನ್ನೂ ಒಂದು ಮಾತು. ಈಗಿನದು ಕ್ರಾಂತಿಯ ಕಾಲ. ಜೀವನದ ಪರಿಸ್ಥಿತಿಯು ಬಹಳ ತೀವ್ರಗತಿಯಿಂದ ಪಲ್ಲಟಿಸತೊಡಗಿದೆ. ಜಗತ್ತಿನ ಜನಸಂಖ್ಯೆಯೂ ವಿಶೇಷವಾಗಿ ಬೆಳೆಯತೊಡಗಿದೆ. ಯುದ್ಧ ಮೊದಲಾದವುಗಳಿಂದ ಜೀವನ ಸಮಸ್ಯೆ ಬಹಳ ಜಟಿಲವಾಗತೊಡಗಿದೆ. ಜೀವನ ಕಲಹವು ಬಹಳ ಘೋರರೂಪವನ್ನು ತಾಳಹತ್ತಿದೆ. ತರುಣರಲ್ಲಿ ಶಿಕ್ಷಣದಿಂದ ಜೀವನದ ಆಶೆ ಆಕಾಂಕ್ಷೆಗಳು ಬಹಳ ದೊಡ್ಡವಾಗಿ ವಿಶಾಲವಾಗಿ ಬೆಳೆದಿವೆ. ಆದರೆ ಅವರ ಆ ಆಕಾಂಕ್ಷೆಗಳು ತೃಪ್ತಿಗೊಳ್ಳುವ ಸಂಧಿಯು ಬಹಳ ಕಡಿಮೆಯಾಗಿದೆ. ನಿರುದ್ಯೋಗವೂ ಹೆಚ್ಚಾಗಹತ್ತಿದೆ. ಇದೆಲ್ಲದರ ಪರಿಣಾಮವೆಂದು ಇಂದಿನ ಸುಶಿಕ್ಷಿತ ತರುಣರು ಮನೋರೋಗಗಳ ಬೆಳೆವಣಿಗೆಗೆ ಹದವಾದ ಭೂಮಿಯಾಗಿ ಕುಳಿತಿದ್ದಾರೆ. ಅವರನ್ನು ಈ ಗಂಡಾಂತರದಿಂದ ತಪ್ಪಿಸುವುದು ಎಲ್ಲ ಸಮಾಜಸೇವಕರ ಮತ್ತು ರಾಜ್ಯಾಧಿಕಾರಿಗಳ ಕರ್ತವ್ಯವಾಗಿದೆ. ಅದಕ್ಕೆ ಮನೋರೋಗಗಳ ಸಾರಾಸಾರ ವಿವೇಚನೆಯೇ ರಾಮಬಾಣ ಔಷಧವಾಗಿದೆ.

## ೨. ಮನೋರೋಗಗಳು ನಿಜವಾಗಿಯೂ ಇರುವುವೇ ?

ಮನೋರೋಗಗಳೆಂದೆನಿಸಿಕೊಳ್ಳುವ ಘಟನೆಗಳನ್ನು ನಿಜವಾಗಿಯೂ ಮನೋರೋಗಗಳೆಂದೇ ಹೇಳಬಹುದೇ ಎಂಬುದು ಇನ್ನೂ ಅನಿರ್ಣೀತವಾಗಿದೆ. ಕೆಲವು ಜನರ ಅಭಿಪ್ರಾಯದಂತೆ ಎಲ್ಲ ರೋಗಗಳೂ ಶಾರೀರಿಕವೇ ಆಗಿವೆ. ಶರೀರದಿಂದ ಬೇರೆಯಾಗಿ, ಸ್ವತಂತ್ರವಾಗಿ, ಮನಸ್ಸೆಂಬ ತತ್ತ್ವವೊಂದಿರುವುದೆಂಬುದನ್ನು ಸಾಮಾನ್ಯವಾಗಿ ಪಾಶ್ಚಾತ್ಯ ಚಿಕಿತ್ಸಾಪದ್ಧತಿಯನ್ನು ಅನುಸರಿಸುವ ಡಾಕ್ಟರುಗಳು ಒಪ್ಪುವುದಿಲ್ಲ. ಸ್ವತಂತ್ರವಾದ ಮನಸ್ಸಿನ ಅಸ್ತಿತ್ವವು ಅವರ ಮೂಲ ಸಿದ್ಧಾಂತಗಳಿಗೆ ಅಷ್ಟು ಸರಿ ಹೋಗುವುದಿಲ್ಲ. ಅವರು ಹೇಳುವುದೇನೆಂದರೆ: ನಮಗಾಗುವ ಎಲ್ಲ ಆಧಿವ್ಯಾಧಿಗಳಿಗೂ ನಮ್ಮ ದೇಹದ ರಚನೆಯೊಳಗಿನ ದೋಷಗಳೇ ಕಾರಣ. ಮಾನವನೆಂದರೆ ಒಂದು ಬರಿಯ ಯಂತ್ರ. ಗಡಿಯಾರದ ಚಕ್ರಗಳೊಳಗಾಗಲಿ, ಸ್ಪ್ರಿಂಗಿನಲ್ಲಾಗಲಿ ಉಸುಬಿನ ಕಣಗಳು ಸೇರಿದರೆ ಅದು ಹೇಗೆ ಕೆಡುವುದೋ, ಹಾಗೆಯೇ ದೇಹದ ಅಂಗಾಂಗಗಳ ಕೆಲಸದಲ್ಲಿ ಏನಾದರೂ ವಿಘ್ನಗಳಾದೊಡನೆ ಅವುಗಳನ್ನು ನಾವು ಮನೋರೋಗಗಳೆಂದು ಕರೆಯುತ್ತೇವೆ. ಅದರಲ್ಲಿಯೂ ಮುಖ್ಯವಾಗಿ ಮಿದುಳಿನ ಅಥವಾ ನರವ್ಯೂಹದ ರಚನೆಯೊಳಗೆ ಯಾವುದಾದರೂ

ತೊಂದರೆಯುಂಟಾದೊಡನೆ ಅದನ್ನು ನಾವು ಮನೋರೋಗವೆಂದು ಹೇಳುತ್ತೇವೆ. ದೇಹದಲ್ಲಿ ಕೆಲವು ನಿರ್ನಾಳ ಗ್ರಂಥಿಗಳಿರುತ್ತವೆ. ಅವು ರಕ್ತದೊಳಗೆ ಬೇರೆ ಬೇರೆ ಬಗೆಯ ರಸಗಳನ್ನು ನೇರವಾಗಿ ಸುರಿಸುತ್ತವೆ; ಆ ರಸಗಳು ರಕ್ತದಲ್ಲಿ ಬೆರೆತುಕೊಳ್ಳುತ್ತವೆ. ಅದರಿಂದುಂಟಾದ ರಾಸಾಯನಿಕ ಪರಿಣಾಮಗಳು ಮಿದುಳಿನ ಮೇಲೂ ನರವ್ಯೂಹದ ಮೇಲೂ ಆಗಿ, ಮನೋರೋಗಗಳು ಅನುಭವಿಸಲ್ಪಡುತ್ತವೆ. ಅನೇಕ ಬಗೆಯ ರೋಗಗಳಿಗೆ ಸೂಕ್ಷ್ಮ ಜೀವಾಣುಗಳು ಕಾರಣವೆಂದು ಈಗ ಗೊತ್ತುಪಡಿಸಲಾಗಿದೆಯಷ್ಟೆ. ಈ ರೋಗಗಳು ಶರೀರದೊಳಗಾಗುವ ರಾಸಾಯನಿಕ ಕ್ರಿಯೆಗಳಿಂದ ಹುಟ್ಟುತ್ತವೆ. ಹೊರಗಿನಿಂದ ಔಷಧಿಗಳನ್ನು ಕೊಟ್ಟು ಅವುಗಳನ್ನು ನಾಶಪಡಿಸುವಂತೆ ಮನೋರೋಗಗಳನ್ನು ಕೂಡ ಗುಣಪಡಿಸಬಹುದು. ನರ ಅಥವಾ ಮಿದುಳಿಗೆ ಗಾಯವಾಗಿದ್ದರೆ, ಅದನ್ನು ಸರಿಪಡಿಸುವದು ಶಕ್ಯವಿದೆ. ಅವಶ್ಯಬಿದ್ದರೆ ಮಿದುಳಿನ ಅಥವಾ ನರವ್ಯೂಹದ ಕೊಳೆತ ಭಾಗವನ್ನು ಶಸ್ತ್ರಚಿಕಿತ್ಸೆ ಮಾಡಿಯೂ ಗುಣಪಡಿಸಬಹುದು. ಆದುದರಿಂದ, ದೇಹ ಮತ್ತು ನರವ್ಯೂಹದಲ್ಲಿ ಯಾವ ಅಡಚಣೆಗಳಿಲ್ಲದಿದ್ದರೂ, ಮನೋರೋಗಗಳಿಂದ ಬಳಲುತ್ತಿರುವೆವೆಂದು ಹೇಳುವವರನ್ನು ಬರಿಯ ಸೋಮಾರಿಗಳೆಂದು ತಿಳಿಯಬೇಕು. ತಾವು ಮಾಡಬೇಕಾದ ಕೆಲಸವನ್ನು ತಪ್ಪಿಸಿಕೊಳ್ಳಲಿಕ್ಕೆಂದು ಅವರು ಡಾಕ್ಟರುಗಳಿಗೆ ತಿಳಿಯಲಾರದಂತಹ ಮನೋರೋಗದ ಸೋಗು ಹಾಕುವರು, ಅಷ್ಟೆ. ಅವರಿಗೆ ಉಗ್ರವಾದ ಶಾಸನ ಮಾಡುವುದೊಂದೇ ಸರಿಯಾದ

ಉಪಾಯ. ರೋಗದ ನಟನೆಯನ್ನು ಬಿಟ್ಟ ಹೊರತು ಗತಿಯಿಲ್ಲೆಂದೆನಿಸುವಷ್ಟು ಶಾಸನವು ಕ್ರೂರವಾಗಿರಬೇಕು.

ಇಪ್ಪತ್ತನೆಯ ಶತಮಾನದ ಪ್ರಾರಂಭದ ವರೆಗೂ ಮೇಲಿನ ಅಭಿಪ್ರಾಯವು ಸಾಮಾನ್ಯವಾಗಿ ಬಳಕೆಯಲ್ಲಿತ್ತು. ಆದರೆ ಈ ಶತಮಾನದ ಮೊದಲಿನ ೧೫-೨೦ ವರುಷಗಳಲ್ಲಿ ಎರಡು ಸಂಗತಿಗಳು ಈ ಅಭಿಪ್ರಾಯವನ್ನು ಕಿತ್ತುಹಾಕಲು ಸಹಾಯಕವಾದುವು. ಅವುಗಳಲ್ಲಿ ಪ್ರಥಮ ಜಾಗತಿಕ ಯುದ್ಧವು ಮೊದಲನೆಯ ಸಂಗತಿ. ಯುದ್ಧ ನಡೆದಾಗ ಸಾಹಸ, ಧೈರ್ಯ, ಶೌರ್ಯ ಮತ್ತು ಸತ್ಯನಿಷ್ಠೆಗಳಿಗಾಗಿ ಹೆಸರಾದ ಎಷ್ಟೋ ಜನ ತರುಣರು ಸಿಡಿಗುಂಡುಗಳ ಧಕ್ಕೆಗೊಳಗಾಗಿ ಮನೋರೋಗಗಳಿಂದ ಬಳಲಹತ್ತಿದರು. ಮೊದಮೊದಲು ಅವರೆಲ್ಲ ಮೈಗಳ್ಳರೆಂದೂ ಹೇಡಿಗಳೆಂದೂ ತಿಳಿದು, ಅವರನ್ನು ಘೋರ ರೀತಿಯಿಂದ ಶಿಕ್ಷಿಸಲಾಯಿತು. ಆದರೆ ಕ್ರಮೇಣ ಸಾಮಾನ್ಯ ಶಿಪಾಯಿಗಳಲ್ಲದೆ, ದೊಡ್ಡ ದೊಡ್ಡ ಸೇನಾಧಿಕಾರಿಗಳೂ ಕೂಡ ಈ ಮನೋರೋಗಗಳಿಗೆ ತುತ್ತಾಗಹತ್ತಿದರು. ಮತ್ತು ಅವರ ಸಂಖ್ಯೆಯೂ ಬೆಳೆಯುತ್ತ ಹೋಯಿತು. ಅದರಿಂದ ಅವರ ಉಪಚಾರಕ್ಕೆಂದು ನೇಮಕ ಹೊಂದಿದ್ದ ಡಾಕ್ಟರ್ ಜನರು ಮನೋರೋಗಗಳ ಬಗೆಗೆ ತಮ್ಮ ಅಭಿಪ್ರಾಯಗಳನ್ನು ಬದಲಿಸಬೇಕಾಗಿ ಬಂತು. ಈ ತರದ ರೋಗಗಳು ಸಿಡಿಗುಂಡಿನ ಎಡೆಬಿಡದ ಹೊಡೆತಗಳಿಂದಲೂ ಇತರ ವಿಧವಾದ ಯುದ್ಧಾಘಾತಗಳಿಂದಲೂ ಉಂಟಾಗುತ್ತಿದ್ದುವು. ಆದರೆ ದೇಹ ಮತ್ತು ನರವ್ಯೂಹಗಳ ರಚನೆಯಲ್ಲಿ

ಮಾತ್ರ ಮನೋರೋಗಗಳಿಗನುಗುಣವಾದ ಯಾವ ತೆರದ ಮಾರ್ಪಾಟುಗಳೂ ಕಂಡುಬರುತ್ತಿದ್ದಿಲ್ಲ. ಸಾಂಪ್ರದಾಯಿಕವಾದ ರೀತಿಯಿಂದ ಪರೀಕ್ಷೆ ಮಾಡಿ ನೋಡಿದರೆ ಡಾಕ್ಟರುಗಳಿಗೆ ಆ ರೋಗಿಗಳಲ್ಲಿ ಆ ರೋಗಗಳ ಕಾರಣವೆಂದು ಹೇಳಬಹುದಾದ ಯಾವ ವ್ಯತ್ಯಾಸವೂ ತೋರಲಿಲ್ಲ. ಆ ಡಾಕ್ಟರುಗಳ ನಿದಾನ ಕ್ರಮದಂತೆ ಆ ರೋಗಿಗಳು ಪೂರ್ಣ ನೀರೋಗಿಗಳಾಗಿದ್ದರು. ಆದರೆ ಆ ರೋಗಿಗಳ ನಡೆ ನುಡಿ ಮತ್ತು ಬುದ್ಧಿಗಳಲ್ಲಿ ಮಾತ್ರ ಸಾಕಷ್ಟು ಅವ್ಯವಸ್ಥೆ ಕಂಡುಬರುತ್ತಿತ್ತು. ಆ ಡಾಕ್ಟರುಗಳಿಗೆ ಗೊತ್ತಿದ್ದ ಯಾವ ಔಷಧಿಗಳ ಆಟವೂ ಆ ರೋಗಿಗಳ ಮೇಲೆ ನಡೆಯಲಿಲ್ಲ. ಅವರ ಮೇಲೆ ಮಾನಸೋಪಚಾರ ಮಾಡಹತ್ತಲು ಅವರಲ್ಲಿ ಬಹುಜನರು ಮೊದಲಿನಂತೆ ನೀರೋಗಿಗಳಾದರು.

ಮನೋರೋಗಗಳೆಂಬುವು ನಿಜವಾಗಿಯೂ ಮನೋರೋಗಗಳೇ ಹೌದು ಎಂಬ ಅಭಿಪ್ರಾಯದ ಮನ್ನಣೆಗೆ ಸಹಾಯ ಮಾಡಿದ ಎರಡನೆಯ ಮುಖ್ಯ ಮಾತೆಂದರೆ— ಮನೋವಿಶ್ಲೇಷಣ ಶಾಸ್ತ್ರದ ಉಗಮ ಮತ್ತು ಬೆಳವಣಿಗೆ ಈ ಶಾಸ್ತ್ರದ ಜನಕನು ಸಿಗ್ಮಂಡ್ ಫ್ರಾಯ್ಡ್ ಎಂಬ(ಇ.ಸ.೧೮೫೬-೧೯೩೯) ವಿಯೆನ್ನ ಪಟ್ಟಣದ ಸುಪ್ರಸಿದ್ಧ ವಿಜ್ಞಾನಿ. ಅದನ್ನು ಬೆಳಸಿದವರಲ್ಲಿ ಮುಖ್ಯವಾಗಿ ಆ್ಯಡ್ಲರ್ (ಇ.ಸ.೧೮೭೦-೧೯೩೭) ಮತ್ತು ಯೂಂಗ್ (ಜನ್ಮ ಇ. ಸ. ೧೮೭೫) ಎಂಬಿಬ್ಬರ ಹೆಸರುಗಳನ್ನು ಹೇಳಬಹುದು. ಮಾನವನ ದೇಹಚಿಕಿತ್ಸಾ ಕ್ರಮದಲ್ಲಿ ಶಸ್ತ್ರಚಿಕಿತ್ಸೆಗೆ ಯಾವ ಸ್ಥಾನವಿರುವುದೋ ಅದೇ ಸ್ಥಾನವು

ಮಾನವನ ಮಾನಸೋಪಚಾರ ಕ್ರಮದಲ್ಲಿ ಮನೋವಿಶ್ಲೇಷಣ ಕ್ಕಿರುವುದೆಂದು ಯೂಂಗರ ಹೇಳಿಕೆಯಾಗಿದೆ. ಇಂದಿನ ಪಾಶ್ಚಾತ್ಯ ಜೀವನದ ಮೇಲೆ ಮನೋವಿಶ್ಲೇಷಣದ ಪ್ರಭಾವವು ಅನೇಕ ಮುಖವಾಗಿ ಬಿದ್ದಿದೆ. ಅದು ಪಾಶ್ಚಾತ್ಯರ ಜೀವನ ದೃಷ್ಟಿಯನ್ನೇ ಬದಲು ಮಾಡಿದೆಯೆಂತಲೂ ಹೇಳಬಹುದು. ಇಂದು ವಿಚಾರವಂತರೆಂದೆನಿಸಿಕೊಳ್ಳಬೇಕೆನ್ನುವವರು ಮನೋ ವಿಶ್ಲೇಷಣದ ಬಗೆಗೆ ಅಜ್ಞಾನಿಗಳಾಗಿರುವುದು ಶಕ್ಯವಿಲ್ಲ.

ಮನೋವಿಶ್ಲೇಷಣ ಶಾಸ್ತ್ರದ ಮುಖ್ಯ ಸಿದ್ಧಾಂತಗಳನ್ನು ಸಂಗ್ರಹರೂಪವಾಗಿ ಹೀಗೆ ಹೇಳಬಹುದು: (೧) ಮನಸ್ಸೆಂಬು ದೊಂದು ದೇಹದಿಂದ ಬೇರೆಯಾದ ಸ್ವತಂತ್ರವಾದ ವಸ್ತುವಿದೆ. (೨) ಅದರಲ್ಲಿ ಅಜ್ಞಾತವೆಂದೂ ಜ್ಞಾತವೆಂದೂ ಎರಡು ಭಾಗ ಗಳು. (೩) ಅಜ್ಞಾತವಾದುದು ಆಳವಾದ ತೀರ ಕೆಳಗಿನ ಮಟ್ಟದಲ್ಲಿರುತ್ತದೆ. ಅದನ್ನು ಸುಪ್ತ ಅಥವಾ ಅಜಾಗೃತ ಮನ ಸ್ಸೆಂದೂ ಕರೆಯಬಹುದು. ಅದು ಜ್ಞಾತ, ಜಾಗೃತ, ಅಥವಾ ಮೇಲ್ಮೈಯ ಮನಸ್ಸಿನ ಭಾಗಕ್ಕಿಂತ ಬಹಳ ದೊಡ್ಡದಾಗಿದೆ. (೪) ಜಾಗೃತ ಮನಸ್ಸು ಅಜಾಗೃತ ಮನಸ್ಸಿನ ಕೈಗೊಂಬೆಯಾ ಗಿದೆ. (೫) ಮನಸ್ಸು ಅನೇಕ ಸಹಜ ಪ್ರವೃತ್ತಿಗಳಿಂದ ಕೂಡಿದ್ದಾಗಿದೆ. ಅವು ಪರಸ್ಪರ ವಿರುದ್ಧವಾಗಿರುವುದರಿಂದ ಅವುಗಳಲ್ಲಿ ಹೋರಾಟ ಅಥವಾ ತಿಕ್ಕಾಟ ನಡೆಯುವುದು ಸಹಜವಾಗಿದೆ. (೬) ಈ ಹೋರಾಟದಲ್ಲಿ ಕೆಲವು ಪ್ರವೃತ್ತಿ ಗಳು ಹತ್ತಿಕ್ಕಲ್ಪಡುತ್ತವೆ. ಆದರೆ ಅಷ್ಟುಮಾತ್ರದಿಂದ ಅವು ಸಾಯುವುದಿಲ್ಲ. ಅವು ತಮಗೆ ಅನುಕೂಲವಾದ ಸಮಯ

ವನ್ನು ನಿರೀಕ್ಷಿಸುತ್ತ ಕುಳಿತಿರುತ್ತಾನೆ. (೭) ಈ ತಿಕ್ಕಾಟದಿಂದ ಮನಸ್ಸಿನ ಮೇಲೆ ಆಘಾತವುಂಟಾಗಿ ಅದು ಗಾಯಗೊಳ್ಳು ತ್ತದೆ. ಅದರಲ್ಲಿ ಕ್ಷೋಭೆಯೂ ಉಂಟಾಗುತ್ತದೆ. (೮) ಅದ ರಿಂದಲೇ ನಮಗೆ ಗೊತ್ತಾಗದಂತೆ ಅನೇಕ ಬಗೆಯ ಮನೋ ರೋಗಗಳು ಹುಟ್ಟುತ್ತವೆ. (೯) ಆ ರೋಗಗಳನ್ನು ಬರಿಯ ಔಷಧಿಗಳಿಂದ ಗುಣಪಡಿಸುವುದು ಶಕ್ಯವಿಲ್ಲ. ಮಾನಸೋಪ ಚಾರವೇ ಅವುಗಳಿಗೆ ಸರಿಯಾದ ಮದ್ದು. (೧೦) ದುರ್ಬಲ ಪ್ರಕೃತಿಯವರೂ ಚಂಚಲ ಸ್ವಭಾವದವರೂ ಹೆಂಗಸರೂ ಪುಕ್ಕರೂ ಹೇಡಿಗಳೂ ಮಾತ್ರ ಮನೋರೋಗಗಳಿಗೆ ತುತ್ತಾಗುವ ರೆಂಬುದು ಸುಳ್ಳು. ಎಲ್ಲ ಬಗೆಯಿಂದ ಗಟ್ಟಿಮುಟ್ಟಾದವರೆಂದು ಹೆಸರಾದ ವ್ಯಕ್ತಿಗಳೂ ಕೂಡ ಜೀವನದ ಹೋರಾಟದಲ್ಲಿ ಬರ ಬಹುದಾದ ಕಠಿನ ಪ್ರಸಂಗಗಳಿಂದ ಕಂಗೆಟ್ಟು ಮನೋರೋಗಿ ಗಳಾಗಬಹುದು.

ಸಾರಾಂಶವೇನೆಂದರೆ: ಮಾನವನು ಬರಿಯ ಯಂತ್ರವಲ್ಲ. ಆವನು ಯಾವಾಗಲೂ ಸಕಾರಣವಾಗಿ ವರ್ತಿಸುವ ಸ್ವಭಾವ ದವನು. ಅವನು ಕೈಕೊಳ್ಳುವ ಎಲ್ಲ ಚಟುವಟಿಕೆಗಳ ಉದ್ದೇ ಶವೂ ಅವನಿಗೆ ಗೊತ್ತಾಗಿರುವುದೆಂದು ಹೇಳಲಿಕ್ಕಾಗದಿರ ಬಹುದು; ಅಷ್ಟೇ. ಮಾನವನ ವರ್ತನವು ಹೀಗೆ ಉದ್ದೇಶ ಸಹಿತವಾಗಿರುವುದೇ ಮನಸ್ಸೆಂಬ ತತ್ತ್ವವುಂಟೆಂಬುದಕ್ಕೆ ನಿದರ್ಶನವಾಗಿದೆ. ಆ ಮನಸ್ಸಿನ ವ್ಯಾಪಾರ ಅಥವಾ ಚಟು ವಟಿಕೆಗಳಲ್ಲಿ ವ್ಯತ್ಯಾಸವುಂಟಾದೊಡನೆ ಮನೋರೋಗಗಳು ಹುಟ್ಟಬಹುದು. ಶರೀರಕ್ಕೆ ಅಥವಾ ಮಿದುಳಿಗೆ ಗಾಯ ಮೊದ

ಲಾದವುಗಳಾದರೂ ಮನೋರೋಗಗಳು ತೋರಿಕೊಳ್ಳುವುವು. ಎಂದರೆ ಶಾರೀರಿಕ ಕಾರಣಗಳಿಂದಲೂ ಮನೋರೋಗಗಳು ಹುಟ್ಟುವುವು; ಇಲ್ಲವೆಂತಲ್ಲ. ಆದರೆ ದೈಹಿಕ ಕಾರಣಗಳಿಲ್ಲ ದೆಯೂ, ಕೇವಲ ಮನಸ್ಸಿನ ಕ್ಷೋಭೆಯೊಂದರಿಂದಲೇ, ಮಾನ ಸಿಕ ರೋಗಗಳು ಹುಟ್ಟಬಹುದಲ್ಲದೆ, ಅವುಗಳ ಪರಿಣಾಮವು ದೇಹದ ಮೇಲೂ ಆಗಬಹುದು.

ಮನೋವಿಶ್ಲೇಷಣ ಶಾಸ್ತ್ರದ ಎಲ್ಲ ಅಭಿಪ್ರಾಯಗಳೂ ಇಂದಿನ ವಿಚಾರವಂತರಿಗೆ ಗ್ರಾಹ್ಯವಾಗಿರುವುವೆಂದು ಹೇಳಲಿಕ್ಕೆ ಬರಲಾರದು. ಆದರೆ ಮನಸ್ಸೆಂಬುದು ಸತ್ಯವೆಂದೂ ಅದರಲ್ಲಿ ರೋಗಗಳುಂಟಾದ ಮಾನವನಿಗೆ ದುಃಖವಾಗುವುದು ಅನು ಭವದ ಮಾತೆಂದೂ ಹೆಚ್ಚುಹೆಚ್ಚು ಜನರು ಒಪ್ಪುತ್ತಿದ್ದಾರೆ. ಈ ಅಭಿಪ್ರಾಯವನ್ನಿಟ್ಟುಕೊಂಡವರ ದೃಷ್ಟಿಯಿಂದಲೇ ಈ ಪುಸ್ತಕವನ್ನು ಬರೆದದ್ದಾಗಿದೆ. ಅದರೊಳಗಿನ ವಿವೇಚ ನೆಯ ಸತ್ಯಾಸತ್ಯತೆಯನ್ನು ನಿರ್ಣಯಿಸುವುದು ವಾಚಕರ ಕೆಲಸ.



# ೩. ವ್ಯಾಖ್ಯೆ

ಮನೋರೋಗಗಳು ಇರುವುವೆಂದು ಒಪ್ಪಿಕೊಂಡರೂ ಅವುಗಳ ಸರಿಯಾದ ವ್ಯಾಖ್ಯೆಯನ್ನು ಕೊಡುವುದು ಮಾತ್ರ ಸಾಧ್ಯವಿಲ್ಲ. ಅನೇಕರು ಅನೇಕ ಬಗೆಯ ವ್ಯಾಖ್ಯೆಗಳನ್ನು ಸೂಚಿಸಿರುತ್ತಾರೆ. ಆದರೆ ಅವುಗಳಲ್ಲಿ ಯಾವ ವ್ಯಾಖ್ಯೆಯೂ ಸರ್ವಮಾನ್ಯವಾಗಿಲ್ಲ. ಒಂದೊಂದು ವ್ಯಾಖ್ಯೆಯಲ್ಲಿ ಮನೋರೋಗಗಳ ಒಂದೊಂದು ಅಂಗವು ಸ್ಫುಟವಾಗಿರುವುದೇ ವಿನಾ, ಯಾವ ವ್ಯಾಖ್ಯೆಯೂ ಎಲ್ಲ ಅಂಗಗಳನ್ನು ಒಳಕೊಂಡದ್ದಾಗಿರುವುದಿಲ್ಲ. ಆದರೂ ಈ ವಿಷಯದ ಅಭ್ಯಾಸ ಮಾಡಬೇಕೆನ್ನುವವರು ಯಾವುದಾದರೂ ಒಂದು ವ್ಯಾಖ್ಯೆಯನ್ನವಲಂಬಿಸಿ ಹೊರಡಬೇಕೆಂಬುದು ಸ್ಪಷ್ಟವಾಗಿದೆ.

ಮನೋರೋಗವು ಮನಸ್ಸಿನ ಒಂದು ವಿಶಿಷ್ಟ ಸ್ಥಿತಿ. ಮನಸ್ಸು ಹೇಗೆ ಕೆಲಸ ಮಾಡಬೇಕೋ ಹಾಗೆ ಕೆಲಸ ಮಾಡದೆ ಹೋದರೆ, ಅದಕ್ಕೆ ರೋಗವಾಗಿದೆಯೆಂದು ನಾವು ಹೇಳಬಹುದು. ನೀರೋಗಿಯಾದ ಮನಸ್ಸು ಇಷ್ಟವಾದ, ಯೋಗ್ಯವಾದ ಮತ್ತು ಸಮರ್ಥವಾದ ರೀತಿಯಲ್ಲಿ ವ್ಯವಹರಿಸಬಲ್ಲ ಶಕ್ತಿಯುಳ್ಳದ್ದಾಗಿದೆ. ಜೀವನದ ಹೋರಾಟದಲ್ಲಿ ಅನೇಕ ಬಗೆಯ ಸಂದರ್ಭಗಳು ಬಂದೊದಗುತ್ತವೆ. ಅವುಗಳನ್ನು ಸರಿಯಾಗಿ ಎದುರಿಸಿ ಕಾರ್ಯಕ್ಷಮವಾದ ರೀತಿಯಲ್ಲಿ ಮನಸ್ಸು ವ್ಯಾಪಾರ ಮಾಡಬಲ್ಲದ್ದಾಗಿದ್ದರೆ, ಅದನ್ನು ನಾವು

ನೀರೋಗಿಯಾದ ಮನಸ್ಸೆಂದು ಹೇಳುತ್ತೇವೆ. ಹೀಗೆ ಮಾಡ ಲಾರದ ಮನಸ್ಸು ರೋಗಯುಕ್ತ ವಾಗಿದೆಯೆಂದು ತಿಳಿಯ ಬೇಕು.

ಇದಕ್ಕಿಂತಲೂ ಮುಂದೆ ಹೋಗಿ, ಮನಃಸ್ವಾಸ್ಥ್ಯ ಮತ್ತು ಮನೋರೋಗಗಳ ನಡುವೆ ಸ್ಪಷ್ಟವಾದ ಗೆರೆಯನ್ನೆಳೆ ಯುವುದು ಸುಲಭವಾದ ಕೆಲಸವಲ್ಲ. ಏಕೆಂದರೆ ಮನಃ ಸ್ವಾಸ್ಥ್ಯವುಳ್ಳವನೆಂದು ಹೆಸರಾದ ವ್ಯಕ್ತಿಯೂ ಒಮ್ಮೊಮ್ಮೆ ಮನೋರೋಗವುಳ್ಳವನಂತೆ ವರ್ತಿಸುವುದು ಕಂಡುಬರುತ್ತದೆ. ಮನೋರೋಗಿಯೆಂದು ತಿಳಿಯಲ್ಪಟ್ಟವನೂ ಕೆಲವು ವೇಳೆ ನೀರೋಗಿಯಾದವನಂತೆ ನಡೆದುಕೊಳ್ಳಬಹುದಾಗಿದೆ. ಒಳ್ಳೊ ಳ್ಳೆಯ ಜನರೂ ಒಮ್ಮೊಮ್ಮೆ ಹುಚ್ಚರಂತೆ ಆಚರಣೆ ಮಾಡು ವದನ್ನು ನಾವು ನೋಡುತ್ತೇವೆ. ಹುಚ್ಚರಾದವರೂ ಒಮ್ಮೊಮ್ಮೆ ಜಾಣ್ಮೆಯನ್ನು ತೋರಿಸುತ್ತಾರೆ. ಆದುದರಿಂದ ಮನಃಸ್ವಾಸ್ಥ್ಯ ಮತ್ತು ಮನೋರೋಗಗಳ ನಡುವಿನ ಭೇದವನ್ನು ನಿಃಸಂದೇಹ ವಾಗಿ ತಿಳಿಸುವುದು ಕಠಿನವಾಗಿದೆ. ಅವೆರಡರ ನಡುವಿನ ಅಂತರವು ಬಹಳ ಸಾವಕಾಶವಾಗಿ ಕ್ರಮಕ್ರಮವಾಗಿ ಹೆಚ್ಚುತ್ತ ಹೋಗುತ್ತದೆ. ನೀರೋಗಿಗಳು ಮತ್ತು ಮನೋರೋಗಿ ಗಳು ಎಂಬ ಭೇದವು ವ್ಯವಹಾರಸಿದ್ಧವಾದ ಮಾತಾಗಿದ್ದರೂ ಕೆಲಕೆಲವು ಪ್ರಸಂಗಗಳಲ್ಲಿ ಯಾವನೊಬ್ಬನು ನೀರೋಗಿ ಯಾಗಿರುವನೋ ಮನೋರೋಗಗ್ರಸ್ತನಾಗಿರುವನೋ ಎಂಬು ವನ್ನು ನಿರ್ಣಯಿಸುವುದು ಬಹಳ ಕಠಿನವಾಗುವುದೆಂಬುದರಲ್ಲಿ ಸಂದೇಹವಿಲ್ಲ.

ಮನೋರೋಗಗಳ ವ್ಯಾಖ್ಯೆಗಳು ಅನೇಕ ದೃಷ್ಟಿಯಿಂದ ಮಾಡಲ್ಪಟ್ಟಿವೆ. ಅವುಗಳನ್ನೆಲ್ಲ ಸವಿಸ್ತಾರವಾಗಿ ಇಲ್ಲಿ ಚರ್ಚಿಸುವುದು ಸಾಧ್ಯವಿಲ್ಲ. ಅವುಗಳಲ್ಲಿ ಮುಖ್ಯವಾದ ಎರಡನ್ನಷ್ಟೆ ಇಲ್ಲಿ ವಿವರಿಸುವೆವು. ಅವುಗಳನ್ನು ಕೂಡ ವಿಶೇಷವಾಗಿ ಪರೀಕ್ಷಿಸದೆ, ನಿರ್ದೇಶ ಮಾತ್ರ ಮಾಡಿ ಮುಂದೆ ಸಾಗುವೆವು.

ಮೊದಲನೆಯದು ಸಂಖ್ಯಾಶಾಸ್ತ್ರದ ( Statistics ) ಆಧಾರದಿಂದ ಹೊರಡುವಂತಹದು. ಯಾವುದೊಂದು ರಾಷ್ಟ್ರದೊಳಗಿನ ಬೇಕಾದ ಭಾಗಗಳಿಂದ ಒಂದು ವಿಶಿಷ್ಟ ಸಂಖ್ಯೆಯಷ್ಟು ಜನರನ್ನು ಆರಿಸಿಕೊಂಡು ನಾವು ಈ ಪ್ರಶ್ನೆಯನ್ನು ಬಿಡಿಸಬಹುದು. ಉದಾ : ಒಂದು ನೂರು ಅಥವಾ ಸಾವಿರದಷ್ಟು ಜನರನ್ನು ಆರಿಸಿಕೊಂಡು ಪರೀಕ್ಷೆ ಮಾಡಿದರೆ, ಅವರಲ್ಲಿ ನಮಗೆ ಮೂರು ವರ್ಗದ ಜನರು ಸಿಕ್ಕುವರು : (೧) ನೂರಕ್ಕೆ ತೊಂಬತ್ತರಷ್ಟು ಜನರು ಸಾಮಾನ್ಯವಾಗಿ ನೀರೋಗಿಯಾದವರೆಂಬ ಗುಂಪಿಗೆ ಸೇರ ತಕ್ಕವರು. (೨) ಒಬ್ಬಿಬ್ಬರು ವ್ಯಕ್ತಿಗಳು ಅಸಾಧಾರಣ ಪ್ರತಿಭಾ ಶಾಲಿಗಳಾಗಿ ಶ್ರೇಷ್ಠಪುರುಷರೆನಿಸಿಕೊಳ್ಳುವವರು. (೩) ಉಳಿದವರು ಒಂದಿಲ್ಲೊಂದು ತರದ ಮನೋರೋಗಗಳಿಂದ ಬಳಲುವವರು.

ಮೇಲಿನ ಅಂಕಿ ಸಂಖ್ಯೆಗಳ ಆಧಾರದಿಂದ ನೂರಕ್ಕೆ ೯೦ ರಷ್ಟು ಜನ ಹೇಗೆ ಇರುವರೋ ಹಾಗೆ ಇರುವವನು ನೀರೋಗಿಯೆಂದು ನಾವು ವ್ಯಾಖ್ಯೆ ಮಾಡಿ, ಯಾವನು ಈ

ಸರಾಸರಿಯ ಮಟ್ಟಕ್ಕೆ ಬರುವುದಿಲ್ಲವೋ ಅವನನ್ನು ಮನೋರೋಗಿಯೆಂದು ಕರೆಯಬಹುದು. ತನ್ನ ಜೋಡಿಯ ಬಹಳ ಸಂಖ್ಯೆಯ ಜನರು ಅದೇ ಸಂದರ್ಭದಲ್ಲಿ ಇರುವ ಹಾಗೆ ಯಾವನು ಇರುವುದಿಲ್ಲವೋ ಅವನಲ್ಲಿ ಮನೋರೋಗವುಂಟಾಗಿರುವುದೆಂದು ನಾವು ತಿಳಿಯಬಹುದು. ಎಂದರೆ ಯಾವನು ವಿಲಕ್ಷಣವಾದ, ವಿಚಿತ್ರವಾದ ಮತ್ತು ಅಸಾಮಾನ್ಯವಾದ ರೀತಿಯಲ್ಲಿ ವರ್ತಿಸುವನೋ ಅವನು ಮನೋರೋಗಿ. ಆದರೆ ಇಷ್ಟರಿಂದ ನಮ್ಮ ವ್ಯಾಖ್ಯೆ ಪೂರ್ಣವಾಗುವುದಿಲ್ಲ. ಏಕೆಂದರೆ ಒಂದೊಂದು ಸಲ ಅತ್ಯಂತ ಶ್ರೇಷ್ಠ ಜನರೂ ಬಹಳ ವಿಚಿತ್ರವಾದ ನಡೆನುಡಿಗಳುಳ್ಳವರಾಗಿರಬಹುದು. ಆದರೂ ನಾವು ಅವರನ್ನು ಮನೋರೋಗಿಗಳೆಂದು ಕರೆಯುವ ಸಾಹಸ ಮಾಡಲಾರೆವು. ಆದುದರಿಂದ ವಿಚಿತ್ರ ಅಥವಾ ಅಸಾಮಾಜಿಕ ನಡತೆಯ ಜೊತೆಗೆ ಇನ್ನೂ ಒಂದು ಅಂಶವನ್ನು ಈ ವ್ಯಾಖ್ಯೆಯಲ್ಲಿ ಸೇರಿಸಬೇಕಾಗುವುದು. ತನ್ನ ಪಾಲನೆ, ರಕ್ಷಣೆ ಅಥವಾ ಪರಾಮರಿಕೆಯನ್ನು ಮಾಡಿಕೊಳ್ಳಲು ಅಸಮರ್ಥತೆ ಎಂಬುದೇ ಹೀಗೆ ಸೇರಿಸಬೇಕಾದ ಹೊಸ ಅಂಶ. ಈ ರೀತಿ ಈ ಎರಡೂ ಅಂಶಗಳನ್ನು ಸೇರಿಸಿ ಮನೋರೋಗದ ವ್ಯಾಖ್ಯೆಯನ್ನು ಪೂರ್ತಿಗೊಳಿಸಬಹುದು. ಮನೋರೋಗಿಯೆಂದರೆ ಅಸಾಮಾಜಿಕವಾದ ರೀತಿಯಲ್ಲಿ ವರ್ತಿಸುವ, ತನ್ನ ಹಿತವನ್ನು ತಾನರಿಯದ ಮತ್ತು ಅನುಕಂಪನೀಯವಾದ ಸ್ಥಿತಿಯಲ್ಲಿರುವ ವ್ಯಕ್ತಿ.

ಈ ಸಂಖ್ಯಾಶಾಸ್ತ್ರದ ವ್ಯಾಖ್ಯೆಯಲ್ಲಿ ಒಂದು ದೋಷವಿದೆ.

ಮನೋರೋಗಿಗಳೂ ಸಾಮಾನ್ಯರೂ ಒಂದೇ ಜಾತಿಯ ಜ
ರೆಂದು ಅದು ಭಾವಿಸುತ್ತದೆ. ಮನಸ್ಸಿನ ರೋಗಯು
ಸ್ಥಿತಿಗೂ ನೀರೋಗದ ಸ್ಥಿತಿಗೂ ಗುಣತಃ ಏನೂ ಭೇದವಿ
ಎಂಬ ವಿವಾದಾಸ್ಪದವಾದ ಭೂಮಿಕೆಯಿಂದ ಅದು ಹೊರಡ
ತ್ತದೆ. ಮನಃಸ್ವಾಸ್ಥ್ಯಕ್ಕೂ ಮನೋರೋಗಕ್ಕೂ ಭೇದವಿ
ವುದು ಪರಿಮಾಣ, ಗಾತ್ರ ಅಥವಾ ಮೊತ್ತದಲ್ಲಿ ಮಾತ್ರ; ಬೇ
ಶಬ್ದಗಳಲ್ಲಿ ಹೇಳಬೇಕಾದರೆ, ನೀರೋಗ ಮನಸ್ಸಿನ ಇಷ್ಟ
ಪಟ್ಟು ಅಥವಾ ಅಂಶದಷ್ಟು ಆದಲ್ಲಿ ಮನೋರೋಗವೆಂದು ಹೇ
ಬೇಕಾಗುತ್ತದೆ. ಹೀಗೆ ಅರ್ಥ ಮಾಡುವುದು ಸಮಂಜಸವಲ್ಲ
ಕಾಗೆಗೂ ರಾಜಹಂಸಕ್ಕೂ ಇರುವ ಮುಖ್ಯವಾದ ಗುಣ
ವೈಷಮ್ಯವನ್ನು ಮರೆತು, ಕಾಗೆಯ ಕೆಲವು ಪಟ್ಟಿನಷ್ಟು ಆದಲ್ಲಿ
ರಾಜಹಂಸವೆಂದು ಹೇಳುವುದು ಸರಿಯಾದೀತೇ? ಆದುದರಿಂದ
ಸಂಖ್ಯಾಶಾಸ್ತ್ರದ ಆಧಾರದ ಮೇಲೆ ರಚಿಸಿದ ಈ ವ್ಯಾಖ್ಯೆಯು
ತಪ್ಪಾದುದೆಂದು ಬೇರೆ ಕೆಲವರು ಅಭಿಪ್ರಾಯಪಟ್ಟು, ಹೊಸ
ವ್ಯಾಖ್ಯೆಯನ್ನು ಸೂಚಿಸುತ್ತಾರೆ.

ಸಂಖ್ಯಾಶಾಸ್ತ್ರದ ವ್ಯಾಖ್ಯೆಯು ಸರಾಸರಿಯ ದೃಷ್ಟಿಯಿಂದ
ಮನೋರೋಗವನ್ನು ವರ್ಣಿಸುತ್ತದೆ. ಯಾವುದು ಸರಾಸರಿಗೆ
ಅಥವಾ ಸಾಮಾನ್ಯಕ್ಕೆ (normal or average) ಹೊಂದಿ
ಕೊಂಡಿರುವುದಿಲ್ಲವೋ ಅದು ರೋಗಮಯಸ್ಥಿತಿಯೆಂದು ಆ
ವ್ಯಾಖ್ಯೆಯ ಆಶಯವಾಗಿದೆ. ಆದರೆ ನಿರ್ವಿಕಾರ ಮನಸ್ಸಿ
ನಿಂದ ವಿಚಾರ ಮಾಡಿದರೆ, ರೋಗಿಗಳಲ್ಲಿ ಕಂಡುಬರುವ
ಲಕ್ಷಣಗಳೇ ಬೇರೆ, ನೀರೋಗಿಯನ್ನು ಗುರುತಿಸುವ ಲಕ್ಷಣ

ಗಳೇ ಬೇರೆ. ಆದುದರಿಂದ ಯಾರನ್ನು ನಾವು ಮನೋರೋಗಿಗಳೆಂದು ತಿಳಿಯುವೆವೋ ಅವರನ್ನೇ ತೆಗೆದುಕೊಂಡು ಅವರಿಗೆಲ್ಲ ಸಾಮಾನ್ಯವಾಗಿರುವ ಲಕ್ಷಣಗಳ ಮೇಲಿನಿಂದ ಮನೋರೋಗದ ವ್ಯಾಖ್ಯೆ ಮಾಡುವುದು ಹೆಚ್ಚು ಯೋಗ್ಯವಾಗುವುದು. ಈ ವ್ಯಾಖ್ಯೆಯನ್ನು ಮಾಡುವ ದೃಷ್ಟಿಗೆ ರೋಗನಿದಾನಶಾಸ್ತ್ರ (pathology) ದ ದೃಷ್ಟಿ ಎಂದು ಕರೆಯುತ್ತಾರೆ. ನೀರೋಗಿಯಾದ ಸಾಮಾನ್ಯಮನುಷ್ಯನಲ್ಲಿ ಕಂಡುಬಾರದ, ಆದರೆ ಮನೋರೋಗಿಗಳಲ್ಲಿ ಮಾತ್ರ ತಪ್ಪದೆ ಕಂಡುಬರುವ ಲಕ್ಷಣಗಳ ಮೇಲೆ ಈ ವ್ಯಾಖ್ಯೆ ಅವಲಂಬಿಸಿದೆ. ಸರಾಸರಿ ಮನುಷ್ಯನ ಆಚಾರ, ವಿಚಾರ ಮತ್ತು ಭಾವಗಳು (emotions) ಮನೋರೋಗಿಗಳಲ್ಲಿ ಕಂಡುಬರುವ ಅವೇ ಸಂಗತಿಗಳಿಗಿಂತ ತೀರ ಬೇರೆಯಾಗಿವೆ. ಮನಸ್ಸು ಮೂರು ವಿಧವಾಗಿ ಕೆಲಸ ಮಾಡುತ್ತದೆಂದು ಮಾನಸಶಾಸ್ತ್ರಜ್ಞರು ನಿರ್ಣಯಿಸಿದ್ದಾರೆ. (೧) ತಿಳಿವಳಿಕೆ (೨) ಭಾವ ಮತ್ತು (೩) ಆಚಾರ ಎಂಬಿವೇ ಮನಸ್ಸಿನ ತ್ರಿವಿಧ ರೂಪಗಳು. ಮನಸ್ಸು ರೋಗವಿರಹಿತವಾಗಿದ್ದರೆ, ಈ ಮೂರೂ ಭಾಗಗಳಲ್ಲಿ ಏಕಸೂತ್ರತೆಯಿರುತ್ತದೆ. ಅದು ಇಲ್ಲದಂತಾಗುವುದೇ ಮನೋರೋಗ. ಯಾವನ ವಿಚಾರಗಳಲ್ಲಿ ವ್ಯವಸ್ಥೆಯಿರುವುದಿಲ್ಲವೋ ಯಾವನ ಭಾವಗಳು ಚಂಚಲವಾಗಿರುವುವೋ ಯಾವನ ಆಚರಣೆಯಲ್ಲಿ ಸ್ಥಿರತೆಯಿರುವುದಿಲ್ಲವೋ ಅವನು ಮನೋರೋಗಿ. ವಿಚಾರ ಮತ್ತು ಭಾವಗಳ ನಡುವೆ ಇರಬೇಕಾದ ತಾಳ ತಪ್ಪಿ, ಅವೆರಡಕ್ಕೂ ಆಚಾರಕ್ಕೂ ಹೊಂದಿಕೆಯಿಲ್ಲದಂತಾದ

ವ್ಯಕ್ತಿಯೇ ಮನೋರೋಗಿ.

ಮೇಲುನೋಟಕ್ಕೆ ಇವೆರಡೂ ವ್ಯಾಖ್ಯೆಗಳು ತೀರ ಬೇರೆ ಬೇರೆಯಾಗಿರುವುವೆಂದು ತೋರಿದರೂ, ಎರಡರ ಮುಖ್ಯ ಆಶಯವು ಒಂದೇ ಆಗಿದೆ. ಎರಡನೆಯ ವ್ಯಾಖ್ಯೆಯು ಸಂಗ್ರಹವಾಗಿ, ಯಾವನ ವ್ಯಕ್ತಿತ್ವವು ಸರಿಯಾಗಿ ಇಡಿಯಾಗಿ ಬೆಳೆದಿಲ್ಲವೋ ಅವನು ಮನೋರೋಗಿಯೆಂದು ಹೇಳಿ, ಅತಿವ್ಯಾಪ್ತಿಯ ದೋಷಕ್ಕೆ ಎಡೆಮಾಡಿ ಕೊಡುವಂತೆ ಕಾಣುತ್ತದೆ. ಅದು ಸರಿಯೆಂದು ತಿಳಿದರೆ ನೂರಕ್ಕೆ ೯೦ರಷ್ಟು ಜನ ಮನೋರೋಗಗ್ರಸ್ತರಾಗಿರುವರೆಂದು ಹೇಳಬೇಕಾದೀತು. ಆದರೆ ಅಂತಹ ತಪ್ಪನ್ನು ಯಾರೂ ಮಾಡಬೇಕಾಗಿಲ್ಲ.

ಇಷ್ಟನ್ನು ನೆನಪಿನಲ್ಲಿಡಬೇಕು: ಮನೋರೋಗಗಳೆಂದರೆ ಸಾಂಕ್ರಾಮಿಕ ರೋಗಗಳಂತೆ ಹೊರಗಿನಿಂದ ಬಂದು ನಮಗೆ ಅಂಟಿಕೊಳ್ಳುವ ಸಂಗತಿಗಳಲ್ಲ. ನಮ್ಮ ವ್ಯಕ್ತಿವಿಕಾಸದೊಳಗಿನ ತಪ್ಪು ಅಥವಾ ದೋಷಗಳೇ ಮನೋರೋಗಗಳೆಂದು ಕರೆಯಲ್ಪಡುತ್ತವೆ. ಮನೋರೋಗಗಳಲ್ಲಿ ಎರಡು ಅಂಶಗಳು ಮುಖ್ಯವಾಗಿವೆ: (೧) ಸಮಾಜಕ್ಕೆ ಸರಿಹೊಂದುವ ರೀತಿಯಲ್ಲಿ ವರ್ತನೆ ಮಾಡದಿರುವುದು ಮತ್ತು (೨) ತನ್ನ ರಕ್ಷಣೆಯನ್ನು ಮಾಡಿಕೊಳ್ಳಲಿಕ್ಕೆ ಅಸಮರ್ಥನಾಗಿರುವುದು. ಇವೆರಡೂ ಲಕ್ಷಣಗಳು ಎಲ್ಲಿ ಇರುವುವೋ ಅಲ್ಲಿ ಮನೋರೋಗವಿರುವುದೆಂದು ಹೇಳಬಹುದು.

ಇವೆರಡೂ ಲಕ್ಷಣಗಳು ಎಲ್ಲ ಮನೋರೋಗಗಳಲ್ಲಿ ಒಂದೇ ಪ್ರಮಾಣದಲ್ಲಿ ಇರುವುವೆಂದು ಹೇಳಲಿಕ್ಕಾಗದು.

ತುಸು ಹೆಚ್ಚುಕಡಿಮೆ ಪ್ರಮಾಣದಿಂದ ಅವೆರಡೂ ಎಲ್ಲ ಕಡೆಗೆ ಇರುತ್ತವೆಂಬುದು ಮಾತ್ರ ಸತ್ಯ. ಇವೆರಡೂ ಲಕ್ಷಣಗಳು ಮಂದ ಅಥವಾ ತೀರ ಕಡಿಮೆ ಪ್ರಮಾಣದಲ್ಲಿದ್ದರೆ, ಸಾಮಾನ್ಯ ವಾಗಿ ಅಂತಹ ಮನೋವೈಕಲ್ಯಗಳನ್ನು ನರರೋಗ (neurosis) ಗಳೆಂದು ಕರೆಯುತ್ತಾರೆ. ಅವು ಮಧ್ಯಪ್ರಮಾಣ ದಲ್ಲಿದ್ದರೆ ಮನೋರೋಗ ( psychosis ) ಗಳೆಂದು ಕರೆಯು ತ್ತಾರೆ. ತೀವ್ರ ಪ್ರಮಾಣದಲ್ಲಿದ್ದರೆ ಹುಚ್ಚು ಎಂದು ಕರೆ ಯುತ್ತಾರೆ.

ನರರೋಗಿಯಲ್ಲಿ ಸಮಾಜಭಾವನೆಯು ಚೆನ್ನಾಗಿಯೇ ಇರುತ್ತದೆ, ಹಾಗೂ ತನಗೆ ಏನು ಬೇಕು ಮತ್ತು ತನ್ನ ಆವಶ್ಯ ಕತೆಗಳೇನು ಎಂಬ ಕಲ್ಪನೆಯೂ ಸರಿಯಾಗಿ ಇರುತ್ತದೆ. ಆದರೆ ಅವೆರಡನ್ನೂ— ಎಂದರೆ ಸಮಾಜದೊಡನೆ ಯುಕ್ತವಾದ ರೀತಿ ಯಲ್ಲಿ ನಡೆದುಕೊಳ್ಳುವುದು ಮತ್ತು ತನ್ನ ಹಿತವನ್ನು ಕಾಪಾಡಿ ಕೊಳ್ಳುವುದು ಇವನ್ನು—ಸಾಧಿಸಿಕೊಳ್ಳುವ ಶಕ್ತಿ ಮಾತ್ರ ಇರು ವುದಿಲ್ಲ. ಎರಡೂ ಸಿಕ್ಕಬೇಕೆಂಬ ಅಪೇಕ್ಷೆಯಿದ್ದರೂ ರೋಗಿಯು ಅನುಸರಿಸುವ ಮಾರ್ಗವು ತಪ್ಪಾಗಿರುತ್ತದೆ. ಆದರೂ ಇಂತಹ ರೋಗಿಯು ವ್ಯವಹಾರಕ್ಕೆ ತೀರ ಅಯೋಗ್ಯ ನೆಂದು ಮಾತ್ರ ಯಾರೂ ತಿಳಿಯುವುದಿಲ್ಲ. ಅವನು ತುಸು ವಿಲಕ್ಷಣ ವರ್ತನೆಯ ವ್ಯಕ್ತಿಯೆಂದು ತಿಳಿದು, ಉಳಿದವರು ಅವನ ಸಂಗಡ ವ್ಯವಹಾರ ಮಾಡುತ್ತಾರೆ.

ಎರಡನೆಯ ತರಗತಿಯ ಮನೋರೋಗಿಯಲ್ಲಿ ಜನರು ತನಗೆ ಏನೆಂದಾರೆಂಬ ಭಾವನೆಯು ಕಡಿಮೆಯಾಗಿರುತ್ತದೆ.

ಉಳಿದವರ ಮಾತುಗಳನ್ನೂ ಅವನು ಕೇಳುವ ಸ್ಥಿತಿಯಲ್ಲಿರುವುದಿಲ್ಲ. ಸುತ್ತಲಿನ ಪರಿಸ್ಥಿತಿಯ ತಿಳಿವಳಿಕೆಯೂ ಅವನಲ್ಲಿ ಯಥಾರ್ಥವಾಗಿರುವುದಿಲ್ಲ. ಆಧಾರವಿಲ್ಲದ ಮನೋಭ್ರಾಂತಿಗಳೂ ಭಾವನೆಗಳೂ ಅವನನ್ನು ಪೀಡಿಸುತ್ತಿರುತ್ತವೆ. ಅವನು ಹೀಗೇಕೆ ವರ್ತಿಸುತ್ತಿರುವನೆಂಬುದನ್ನು ಉಳಿದವರು ಅರಿಯಲಾರದಂತಹ ಸ್ಥಿತಿಯಿರುತ್ತದೆ. ಅವನು ತನ್ನದೇ ಆದ ಒಂದು ಕಲ್ಪನಾರಾಜ್ಯದಲ್ಲಿ ಇರುತ್ತಾನೆ. ಆದರೂ ಅವನಿಂದ ಪರರು ಹೆದರುವಂತಹ ಸ್ಥಿತಿಯಿರುವುದಿಲ್ಲ. ಅವನನ್ನು ಯಾವಾಗಲೂ ಒಬ್ಬರು ಕಾಯುತ್ತಿರಬೇಕೆಂಬ ಅಗತ್ಯವಿರುವುದಿಲ್ಲ.

ತೀವ್ರಮನೋರೋಗಿಯನ್ನು ಹುಚ್ಚನೆಂದು ಕರೆಯುತ್ತಾರೆ. ಹುಚ್ಚನಾದವನು ತನ್ನ ವ್ಯವಸ್ಥೆಯನ್ನು ತಾನೇ ಮಾಡಿಕೊಳ್ಳುವ ಸ್ಥಿತಿಯಲ್ಲಿರುವುದಿಲ್ಲ. ಉದಾಹರಣೆಗೆ, ಹಸಿವೆ ಅಧಿಕವಾಗಿದ್ದರೂ ಊಟ ಮಾಡಬೇಕೆಂಬ ಎಚ್ಚರಿಕೆ ಅವನಲ್ಲಿರುವುದಿಲ್ಲ. ಚಳಿಯ ಬಾಧೆಯಾಗುತ್ತಿದ್ದರೂ ಅರಿವೆ ಹಾಕಿಕೊಳ್ಳಬೇಕು ಅಥವಾ ಹೊದೆದುಕೊಳ್ಳಬೇಕೆಂದು ಅವನು ಪ್ರಯತ್ನ ಮಾಡುವುದಿಲ್ಲ. ಅವನ ಎಲ್ಲ ವ್ಯವಸ್ಥೆಯನ್ನೂ ಎರಡನೆಯವರೇ ಮಾಡಬೇಕಾಗುತ್ತದೆ. ಸಮಾಜದ ಪರಿವೆಯಂತೂ ಅವನಿಗೆ ಎಷ್ಟೂ ಇರುವುದಿಲ್ಲ. ಅವನ ಬುದ್ಧಿವೈಪರೀತ್ಯವು ಅಧಿಕವಾಗಿರುವುದರಿಂದ ಅವನು ಏನೇ ಅಪರಾಧವನ್ನು ಮಾಡಿದರೂ ಕಾಯಿದೆ ಕಾನೂನುಗಳು ಅವನನ್ನು ದಂಡಿಸುವ ಗೋಜಿಗೆ ಹೋಗುವುದಿಲ್ಲ.



# ೪. ಕಾರಣಗಳು

ದೇಹದಿಂದ ಬೇರೆಯಾಗಿ ಮನಸ್ಸೆಂಬ ತತ್ತ್ವವೊಂದಿರುವುದೆಂದೂ ಅದರ ವ್ಯಾಪಾರಗಳಲ್ಲುಂಟಾಗುವ ತೊಂದರೆಗಳೇ ಮನೋರೋಗಗಳೆಂದೂ ಮೇಲೆ ಹೇಳಿದೆವು. ಅದೇ ಮಾತನ್ನೇ ಬೇರೆ ರೀತಿಯಾಗಿ ತಿರುಗಿಸಿ, ವ್ಯಕ್ತಿವಿಕಾಸದೊಳಗಿನ ದೋಷಗಳೇ ಮನೋರೋಗಗಳೆಂದೆನಿಸಿಕೊಳ್ಳುವುವು ಎಂದು ತಿಳಿಸಿದೆವು. ಆದರೆ ಇನ್ನೊಂದು ಮಾತನ್ನು ಇಲ್ಲಿ ಹೇಳಬೇಕಾದುದು ಆವಶ್ಯಕ. ನಮಗೆ ಗೊತ್ತಿದ್ದ ಮಟ್ಟಿಗೆ ಮನಸ್ಸು ದೇಹವನ್ನು ಬಿಟ್ಟು ಸ್ವತಂತ್ರವಾಗಿ ಕೆಲಸ ಮಾಡುವುದಿಲ್ಲ, ಮಾಡಲಾರದು. ಅದು ವಿಶೇಷವಾಗಿ ನಮ್ಮ ತಲೆಬುರುಡೆಯಲ್ಲಿರುವ ಮಿದುಳಿನೊಡನೆ ಸಂಬದ್ಧವಾಗಿ, ಅದರ ಮುಖಾಂತರವೇ ಕೆಲಸ ಮಾಡುತ್ತದೆ. ಎಂದರೆ, ಹೇಗೆ ಬರಿಯ ಮಿದುಳನ್ನೇ ಪರೀಕ್ಷೆ ಮಾಡಿದರೆ ಮನೋರೋಗಗಳ ಮರ್ಮವು ತಿಳಿಯಲಾರದೋ ಹಾಗೆ ಮಿದುಳನ್ನು ಬಿಟ್ಟು ಬರಿಯ ಮನಸ್ಸನ್ನು ಪರೀಕ್ಷೆ ಮಾಡಿದರೂ ಅವುಗಳ ರಹಸ್ಯವು ತಿಳಿಯಲಾರದು. ಮಿದುಳಿನ ಪರಿಣಾಮವು ಮನಸ್ಸಿನ ಮೇಲೂ, ಮನಸ್ಸಿನ ಪರಿಣಾಮವು ಮಿದುಳಿನ ಮೇಲೂ ಆಗುತ್ತಿರುತ್ತದೆ. ಆದುದರಿಂದ ಮನೋರೋಗಗಳ ಕಾರಣಗಳನ್ನು ಹುಡುಕಬೇಕೆನ್ನುವವರು ಮಿದುಳು ಮನಸ್ಸುಗಳ ಮೇಲೆ ಪರಿಣಾಮಗಳನ್ನುಂಟುಮಾಡಬಹುದಾದ ಎಲ್ಲ ಸಂಗತಿಗಳಿಗೂ ಗಮನ ಕೊಡಬೇಕಾಗುತ್ತದೆ.

ಮನೋರೋಗಗಳ ಕಾರಣಗಳು ಅನೇಕವಾಗಿರುತ್ತವೆ. ಯಾವನೊಬ್ಬ ವ್ಯಕ್ತಿಯು ಒಂದು ಮನೋರೋಗದ ನಿದಾನ ಮಾಡಬೇಕಾದರೆ ಅವನ ಪೂರ್ವಾಪರವಾದ ಎಲ್ಲ ಇತಿಹಾಸ ವನ್ನೂ ಅಭ್ಯಾಸ ಮಾಡಬೇಕಾಗುತ್ತದೆ. ಆದುದರಿಂದ ಇಂತಹ ವಿಶಿಷ್ಟ ಮನೋರೋಗಕ್ಕೆ ಇಂತಿಂತಹ ಒಂದೇ ಕಾರಣವಿರುವುದೆಂಬ ಸಾಮಾನ್ಯ ನಿಯಮವನ್ನು ಹಾಕಿ ಕೊಡುವುದು ಶಕ್ಯವಿಲ್ಲ. ವ್ಯಕ್ತಿಯು ಸರಿಯಾಗಿ ವಿಕಾಸ ಗೊಳ್ಳದಿರುವುದೇ ಮನೋರೋಗವೆಂದ ಮೇಲೆ, ವ್ಯಕ್ತಿಯು ತೃಪ್ತಿಕರವಾದ ಬೆಳೆವಣಿಗೆಗೆ ಯಾವ ಯಾವ ಸಂಗತಿಗಳು ಅಡಚಣೆಗಳಾಗಿರುವುವೋ ಅವೆಲ್ಲ ಮನೋರೋಗಕ್ಕೆ ಕಾರಣ ಗಳಾಗುವುವೆಂದು ತಿಳಿಯಬೇಕಾಗುತ್ತದೆ.

ಈ ಕಾರಣಗಳನ್ನು ಬೇರೆ ಬೇರೆ ದೃಷ್ಟಿಗಳಿಂದ ವರ್ಗೀ ಕರಿಸಬಹುದು. ವ್ಯಕ್ತಿಯ ಅಂತರ್ಗತ ಕಾರಣಗಳು, ಬಹಿರ್ಗತ ಕಾರಣಗಳು ಎಂದು ವರ್ಗೀಕರಿಸುವುದು ಒಂದು ಪದ್ಧತಿ. ದೈಹಿಕ, ಮಾನಸಿಕ ಮತ್ತು ಸಾಂಸ್ಕೃತಿಕ ಎಂದು ವಿಂಗಡಿಸು ವುದು ಇನ್ನೊಂದು ರೀತಿ. ವ್ಯಕ್ತಿಯ ಬೆಳೆವಣಿಗೆಯ ದೃಷ್ಟಿ ಯಿಂದ ಗರ್ಭಕಾಲದ, ಬಾಲ್ಯದ ಮತ್ತು ಅನಂತರದ ಕಾರಣ ಗಳೆಂದು ಗುಂಪು ಮಾಡುವುದು ಮೂರನೆಯ ಬಗೆ. ಇದರ ಹೊರತಾಗಿ ಬೇರೆ ರೀತಿಗಳನ್ನೂ ಸೂಚಿಸಬಹುದಾಗಿದೆ. ಆದರೆ ಅವುಗಳ ವಿಚಾರವು ಸದ್ಯಕ್ಕೆ ಅನಾವಶ್ಯಕ.

ಗರ್ಭ ನಿಂತೊಡನೆ ಹೊಸ ವ್ಯಕ್ತಿಯ ಜೀವನವು ಪ್ರಾರಂಭವಾಗುತ್ತದೆ. ತಾಯಿಯ ಗರ್ಭಾಶಯದೊಳಗಿನ

ತತ್ತಿಯು (ovum) ತಂದೆಯ ವೀರ್ಯಾಣುವಿನಿಂದ (sperm) ಕೂಡಿಕೊಂಡಿತೆಂದರೆ ಗರ್ಭ ಕಟ್ಟುತ್ತದೆ. ಹೀಗೆ ಗರ್ಭಕಟ್ಟಿದ ಸಂಯುಕ್ತ ಜೀವಕೋಶವೇ ವ್ಯಕ್ತಿಯ ಮುಂದಿನ ಎಲ್ಲ ವಿಕಾಸಕ್ಕೆ ಆಧಾರ. ಈ ಕೋಶವನ್ನು ವಿಂಗಡಿಸಿ ನೋಡಿದರೆ ಅದರಲ್ಲಿ ತಾಯಿಯಿಂದ ಬಂದ ಇಪ್ಪತ್ತುನಾಲ್ಕು ಸೂಕ್ಷ್ಮವರ್ಣತಂತುಗಳೂ (chromosomes) ಮತ್ತು ತಂದೆಯಿಂದ ಬಂದ ಇಪ್ಪತ್ತುನಾಲ್ಕು ಸೂಕ್ಷ್ಮವರ್ಣತಂತುಗಳೂ ಇರುವುದು ಕಂಡುಬರುತ್ತದೆ. ತಂದೆಯ ಒಂದೊಂದು ಸೂಕ್ಷ್ಮ ವರ್ಣತಂತುವಿಗೆ ತಾಯಿಯ ಒಂದೊಂದು ಸೂಕ್ಷ್ಮವರ್ಣತಂತು ಜೋಡಿಯಾಗಿ ಕೆಲಸ ಮಾಡುತ್ತದೆ. ಹೀಗೆ ಅವೆರಡೂ ಗುಂಪುಗಳ ತಂತುಗಳಲ್ಲಿ ಪರಸ್ಪರ ಸಾಮ್ಯ ಮತ್ತು ಸಂಬಂಧವಿರುತ್ತದೆ. ಇದರ ಹೊರ ತಾಗಿ ಪ್ರತಿಯೊಂದು ತಂತುವಿನಲ್ಲಿ ದಾರದ ಮೇಲೆ ಮಣಿ ಗಳಿರುವಂತೆ ಅತಿ ಸೂಕ್ಷ್ಮವಾದ ಜೀವಾಣುಗಳಿರುತ್ತವೆ. ಇವಕ್ಕೆ ಇಂಗ್ಲಿಷ್ ಭಾಷೆಯಲ್ಲಿ ಜೀನ್ಸ್ (genes) ಎಂದು ಕರೆಯುತ್ತಾರೆ. ತಂದೆತಾಯಿಗಳಿಂದ ಆನುವಂಶಿಕವಾಗಿ ನಮಗೆ ಬರತಕ್ಕ ವಸ್ತುಗಳೆಂದರೆ ಇವೇ. ತಂದೆತಾಯಿಗಳ ಚಿಂತೆ, ಭ್ರಾಂತಿ, ಧೈರ್ಯ, ಸಾಹಸ, ಅಸಾಮಾಜಿಕ ಪ್ರವೃತ್ತಿ ಈ ಮೊದಲಾದವುಗಳು ನಮಗೆ ಸಾಕ್ಷಾತ್ತಾಗಿ ಉಳಿದು ಬರು ವುದಿಲ್ಲ. ತಂದೆತಾಯಿಗಳ ಗುಣವಿಶೇಷಗಳು ಸಂತಾನಕ್ಕೆ ಸಾಗಿಬರುವುದು ಈ ಅತಿಸೂಕ್ಷ್ಮವಾದ ಜೀವಾಣುಗಳ ಮೂಲಕವೇ ಸರಿ. ಈ ಜೀವಾಣುಗಳ ವೈಶಿಷ್ಟ್ಯವೇನೆಂದರೆ,

ಪ್ರತಿಯೊಂದು ಜೀವಾಣುವೂ ತನ್ನ ಸ್ವತಂತ್ರ ಅಸ್ತಿತ್ವ, ರಚನೆ, ಮತ್ತು ಗುಣಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಏನೂ ಹೆಚ್ಚುಕಡಿಮೆಯಾಗದಂತೆ ಇಟ್ಟುಕೊಂಡಿರುತ್ತದೆ. ಹೀಗೆ ಇವು ಬದಲಾಗದೆ ಅನೇಕ ತಲೆಮಾರುಗಳವರೆಗೆ ಹೋಗುತ್ತವೆ. ಸೂಕ್ಷ್ಮವರ್ಣತಂತುಗಳು ಜೋಡಿಯಾಗಿಯೇ ಇರುವಂತೆ, ಈ ಜೀವಾಣುಗಳು ಜೋಡಿಯಾಗಿಯೇ ಕೆಲಸ ಮಾಡುವುವು. ಈ ಜೀವಾಣುಗಳೇ ನರವ್ಯೂಹ, ಮಿದುಳು ಮತ್ತು ದೇಹದ ಉಳಿದೆಲ್ಲ ಅವಯವಗಳ ಬೆಳೆವಣಿಗೆಗೆ ಕಾರಣವಾಗಿರುತ್ತವೆ. ಆ ಬೆಳೆವಣಿಗೆಯ ಮೇಲೆ ವ್ಯಕ್ತಿಯ ವಿಕಾಸವು ಅವಲಂಬಿಸಿರುತ್ತದೆ. ಆದರೆ ಈ ಕಾರ್ಯವೆಲ್ಲ ಹೇಗೆ ನಡೆಯುತ್ತದೆಂಬುದರ ವಿವರವಾದ ಜ್ಞಾನವು ನಮಗೆ ಇನ್ನೂ ಸಿಕ್ಕಿರುವುದಿಲ್ಲ.

ತಂದೆತಾಯಿಗಳಿಗೆ ಮನೋರೋಗಗಳಿದ್ದರೆ ಅವು ಈ ಜೀವಾಣುಗಳ ಮೂಲಕವೇ ಮಕ್ಕಳಿಗೆ ಬರುವ ಸಂಭವವಿದೆ. ಇದನ್ನು ಮನೋರೋಗಗಳ **ಆನುವಂಶಿಕ ಕಾರಣವೆಂದು** ಕರೆಯಬಹುದು. ಆದರೆ ಆನುವಂಶಿಕ ಕಾರಣವು ಮನೋರೋಗಗಳನ್ನು ಎಷ್ಟರಮಟ್ಟಿಗೆ ಹುಟ್ಟಿಸಬಹುದು ಎಂಬ ಬಗೆಗೆ ಮಾನಸೋಪಚಾರ ಶಾಸ್ತ್ರಜ್ಞರಲ್ಲಿ (psychiatrists) ಇನ್ನೂ ಏಕಮತವಾಗಿಲ್ಲ. ಕೆಲವರು ಅದಕ್ಕೆ ಬಹಳ ಮಹತ್ವ ಕೊಟ್ಟರೆ, ಉಳಿದವರು ಅದರ ಮಹತ್ವವನ್ನು ಅಲ್ಲಗಳೆದು, ಆನುವಂಶಿಕವಾಗಿ ಏನೂ ಬರುವುದಿಲ್ಲ, ಎಲ್ಲವೂ ಪರಿಸರಣವನ್ನೇ ( environment ) ಅವಲಂಬಿಸಿದೆಯೆಂದು

ಅಭಿಪ್ರಾಯಪಡುತ್ತಾರೆ. ಆದರೆ ಸಂಖ್ಯಾಶಾಸ್ತ್ರದ ಆಧಾರ
ದಿಂದ ಇಷ್ಟು ಹೇಳಬಹುದು : ತಾಯಿತಂದೆಗಳು ಮನೋ
ರೋಗಿಗಳಾಗಿದ್ದ ಮಾತ್ರಕ್ಕೆ, ಅವರ ಮಕ್ಕಳೂ ಮನೋರೋಗಿ
ಗಳಾಗಿಯೇ ತೀರುವರು ಎಂದು ಹೇಳಲಿಕ್ಕೆ ಬರಲಾರದು.
ರೋಗಿಗಳ ಮಕ್ಕಳು ರೋಗಿಗಳಾಗುವ ಸಂಭವವಿದೆಯೆಂದಿಷ್ಟೇ
ಹೇಳುವುದು ಸರಿಯಾಗುತ್ತದೆ. ಮಕ್ಕಳು ರೋಗ ಬರಲಿಕ್ಕೆ
ಬೇಕಾಗುವ ಹದವಾದ ಭೂಮಿಯಾಗಿರುತ್ತಾರೆ. ಅವರು
ಯೋಗ್ಯ ರೀತ್ರಿಯಿಂದ ನಡೆದುಕೊಂಡರೆ, ಆ ರೋಗವನ್ನು
ತಪ್ಪಿಸಿಕೊಳ್ಳಲಿಕ್ಕೆ ಬರುವಂತಿದೆ. ರೋಗಕ್ಕೆ ಅನುಕೂಲವಾಗಿ
ಹೊರಗಿನ ಕಾರಣಗಳು ಸಾಕಷ್ಟು ಪ್ರಬಲವಾಗದೆ ಹೋದರೆ,
ಅಥವಾ ಮಕ್ಕಳಾದವರು ಬಹಳ ಎಚ್ಚರಿಕೆಯಿಂದ ನಡೆದು
ಕೊಂಡರೆ, ರೋಗಗಳು ಉಂಟಾಗುವ ಅಗತ್ಯವಿಲ್ಲ.

ಇದು ಆಂತರಿಕ ಕಾರಣವಾಯಿತು. ಆದರೆ ಗರ್ಭವು
ತಾಯಿಯ ಗರ್ಭಾಶಯದಲ್ಲಿ ಬೆಳೆಯುತ್ತಿರುವಾಗ ಗರ್ಭಾ
ಶಯದ ಪರಿಸ್ಥಿತಿಯ ಮೂಲಕ ಆ ಕೂಸಿನ ಮಿದುಳಿಗೆ ಧಕ್ಕೆ
ತಟ್ಟುವ ಸಂಭವವಿದೆ; ಅಥವಾ ತಾಯಿಗೆ ಸರಿಯಾದ ಊಟ
ಉಪಚಾರಗಳು ಸಿಕ್ಕದೆ ಹೋದರೆ, ಕೂಸಿನ ಮಿದುಳು ಬೆಳೆಯ
ಬೇಕಾದ ರೀತಿಯಲ್ಲಿ ಬೆಳೆಯದೆ ಹೋಗಬಹುದು. ಆ ಮೇಲೆ
ಜನನವಾಗುವ ಕಾಲಕ್ಕೆ ಯೋಗ್ಯ ಕಾಲದಲ್ಲಿ ಜನನವಾಗದೆ
ಬಹಳ ವೇಳೆ ಬೇನೆ ತಿನ್ನುವ ಪ್ರಸಂಗ ಬಂದರೆ ಅಥವಾ ಗರ್ಭ
ವನ್ನು ಕೃತ್ರಿಮ ಉಪಾಯಗಳಿಂದ ಹೊರಗೆ ತೆಗೆಯುವಾಗ ಕೈ,
ಯಂತ್ರ ಮೊದಲಾದವುಗಳನ್ನು ತಪ್ಪಾದ ರೀತಿಯಲ್ಲಿ ಉಪ

ಯೋಗಿಸಿದರೆ, ಆ ಪ್ರಸಂಗದಲ್ಲಿ ಮಿದುಳಿಗೆ ಪೆಟ್ಟು ತಾಕಿ, ಮಿದುಳು ಪೂರ್ಣವಾಗಿ ವಿಕಸಿತವಾಗದೆ, ಮನೋರೋಗಗಳಿಗೆ ಎಡೆಮಾಡಿಕೊಡಬಹುದು. ಇವೆಲ್ಲ ಕಾರಣಗಳು ಬಾಹ್ಯ ಕಾರಣಗಳಾಗುವುವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಮುಂದೆ ಆ ವ್ಯಕ್ತಿ ದೊಡ್ಡವನಾಗುತ್ತ ಬೆಳೆಯುವಾಗ ಅಥವಾ ದೊಡ್ಡವನಾದ ಮೇಲೆ— (೧) ಮಿದುಳಿಗೆ ಯಾವುದಾದರೂ ಕಾರಣದಿಂದ ಅಕಸ್ಮಾತ್ತಾಗಿ ಅಪಘಾತವಾಗಿ ಪೆಟ್ಟು ಬೀಳಬಹುದು. (೨) ದುರ್ದೈವದಿಂದ ಮಿದುಳಿಗೆ ರೋಗವು ತಾಕಬಹುದು. ಈ ಸಂಬಂಧದಲ್ಲಿ ಒಂದು ಮಾತಿನ ಕಡೆಗೆ ವಾಚಕರ ಲಕ್ಷ್ಯವನ್ನು ಸೆಳೆಯುವಂತಿದೆ. ಉಪದಂಶ ಅಥವಾ ಫಿರಂಗಿ ರೋಗದಲ್ಲಿ (syphilis) ತೀವ್ರವಾದ ಮನೋರೋಗಗಳುಂಟಾಗುವುವೆಂಬುದು ಅನೇಕರಿಗೆ ಗೊತ್ತಿರಬಹುದು. ಅದಕ್ಕೆ ಕಾರಣವೆಂದರೆ ಉಪದಂಶದ ಜಂತುವು ಮಿದುಳಿನ ಒಂದು ವಿಶಿಷ್ಟ ಭಾಗವನ್ನು ತಿಂದು ನಾಶಮಾಡಿಬಿಡುತ್ತದೆ. ಅದರಂತೆ ಬಹಳವಾಗಿ ಮತ್ತು ದೀರ್ಘಾವಧಿಯ ವರೆಗೆ ಸೆರೆ ಕುಡಿಯುವವರೂ ಮನೋರೋಗಕ್ಕೆ ಬಲಿ ಬೀಳುತ್ತಾರೆ. ಅದಕ್ಕೆ ಕಾರಣವೆಂದರೆ, ಸರಾಯಿಯು ದೇಹದಲ್ಲಿ ವಿಷವನ್ನು ಹುಟ್ಟಿಸುತ್ತದೆ. ಆ ವಿಷದಿಂದ ಮಿದುಳು ಸರಿಯಾದ ರೀತಿಯಲ್ಲಿ ಕೆಲಸ ಮಾಡಲಿಕ್ಕೆ ಅಸಮರ್ಥವಾಗುತ್ತದೆ. (೩) ಮಿದುಳಿನ ಜೀವಾಣುಗಳಿಗೆ ನಿತ್ಯವೂ ಆಹಾರ ಬೇಕಾಗುತ್ತದೆಯಷ್ಟೆ. ನಾವು ಅದಕ್ಕೆ ಆವಶ್ಯಕವಾದ ಜೀವಸತ್ತ್ವಗಳು (vitamins) ಉಳ್ಳ ಆಹಾರಗಳನ್ನು ಸಾಕಷ್ಟು ಪ್ರಮಾಣದಲ್ಲಿ

ತಿನ್ನದೆ ಹೋದರೆ, ಮಿದುಳು ಅಶಕ್ತವಾಗಬಹುದು. (೪) ನಮ್ಮ ದೇಹದಲ್ಲಿ ಕೆಲವು ನಿರ್ನಾಳ ಗ್ರಂಥಿಗಳಿದ್ದು ಅವುಗಳೊಳಗಿಂದ ಹಲವು ಬಗೆಯ ರಸಗಳು ಸುರಿದು ರಕ್ತದಲ್ಲಿ ಕೂಡಿಕೊಳ್ಳು ತ್ತವೆ. ಅವುಗಳಿಂದ ಹೀಗೆ ಸ್ರವಿಸುವ ರಸಗಳು ಯೋಗ್ಯ ಪ್ರಮಾಣದಲ್ಲಿರುವುದು ಅಗತ್ಯದ್ದಾಗಿದೆ. ಅವು ಕಡಿಮೆ ಅಥವಾ ಹೆಚ್ಚು ಪ್ರಮಾಣದಲ್ಲಿ ಸುರಿಯಹತ್ತಿದರೆ ಮನೋರೋಗ ಗಳುಂಟಾಗುವುದು ಶಕ್ಯ. ಆದರೂ ಈ ಮಾತಿಗೆ ಬಹಳ ಮಹತ್ತ್ವವನ್ನು ಕೊಡಬೇಕಾಗಿಲ್ಲವೆಂದು ಕೆಲವು ಪಂಡಿತರ ಮತ.

ಇಲ್ಲಿಯ ವರೆಗೆ ವಿವರಿಸಿದ ಎಲ್ಲ ಕಾರಣಗಳನ್ನು "ದೈಹಿಕ" ವೆಂದು ಕರೆಯಬಹುದು. ಏಕೆಂದರೆ ಅವೆಲ್ಲ ದೇಹದೊಳಗಾಗುವ ದೋಷಗಳ ಮುಖಾಂತರವಾಗಿ ಮನೋ ರೋಗಗಳಿಗೆ ಕಾರಣವಾಗುವುವು. ಆದರೆ ನಾವೀಗ ವಿಚಾರ ಮಾಡುತ್ತಿರುವ ದೃಷ್ಟಿಯಿಂದ ನೋಡಿದರೆ, ಮನೋವ್ಯಾಪಾರ ಗಳಲ್ಲಾಗುವ ವ್ಯತ್ಯಯದಿಂದುಂಟಾಗುವ ಮನೋರೋಗಗಳು ಹೆಚ್ಚು ಮಹತ್ತ್ವದವುಗಳು. ಈಗ ನಾವು ಮುಖ್ಯವಾಗಿ ಗಮ ನಿಸಬೇಕಾದುದು ಇದೇ ಸಂಗತಿ. ಈ ರೋಗಗಳು ಹೇಗೆ ಹುಟ್ಟುತ್ತವೆ ಮತ್ತು ಅವುಗಳನ್ನು ನಿವಾರಿಸುವ ಬಗೆಯೇನು ಎಂಬುದು ನಮಗೆ ಹೆಚ್ಚು ಉಪಯುಕ್ತವಾಗಿದೆ.

ಮಾನವನು ಉದ್ದೇಶಪೂರ್ವಕವಾಗಿ ವರ್ತಿಸುವ ಪ್ರಾಣಿ ಯೆಂದು ಈ ಮೊದಲೇ ಹೇಳಿದ್ದೇವೆ. ಅವನನ್ನು ಹೀಗೆ ಚೋದಿಸುವ ಅಥವಾ ಪ್ರೇರಿಸುವ ಹೇತು ಅಥವಾ ಗುರಿಗಳು

ಯಾವುವು ಮತ್ತು ಅವುಗಳ ಸಾಧ್ಯಾಸಾಧ್ಯತೆ ಏತರ ಮೇಲೆ ಅವಲಂಬಿಸಿರುತ್ತದೆ ಎಂಬದನ್ನು ವಿಚಾರ ಮಾಡಿದರೆ, ಮಾನವನ ವ್ಯಕ್ತಿವಿಕಾಸದಲ್ಲಿ ಏಕೆ ದೋಷಗಳುಂಟಾಗುತ್ತವೆಂಬುದು ತಿಳಿಯುವಂತಿದೆ. ಸರಿಯಾದ ವ್ಯಕ್ತಿವಿಕಾಸವು ಮೂರು ಸಂಗತಿಗಳನ್ನು ಅವಲಂಬಿಸಿದೆ : (೧) ಅವನ ವಾಸನೆ, ಬಯಕೆ, ಇಚ್ಛೆ ಮತ್ತು ಜೀವನದ ಮುಖ್ಯ ಆದರ್ಶ ಅಥವಾ ಧ್ಯೇಯ ಮೊದಲಾದವುಗಳಲ್ಲಿ ಎಷ್ಟರ ಮಟ್ಟಿಗೆ ಹೊಂದಿಕೆ, ಮೇಳ ಅಥವಾ ಸಾಮರಸ್ಯವಿರುವುದೆಂಬುದು ಮೊದಲನೆಯದು. (೨) ಅವನ ಪ್ರಬಲವಾದ ವಾಸನೆ ಅಥವಾ ಇಚ್ಛೆಗಳು ಎಷ್ಟರ ಮಟ್ಟಿಗೆ ಸಂತೃಪ್ತವಾಗಿರುತ್ತವೆ ಅಥವಾ ಆಗುವಂತಿರುತ್ತವೆ ಎಂಬುದು ಎರಡನೆಯದು. (೩) ಅವನ ಇಚ್ಛೆ ಮತ್ತು ಆಚರಣೆಗಳು ಅವನಿರುವ ಸಮಾಜದಲ್ಲಿ ರೂಢವಾಗಿರುವ ನೀತಿನಿರ್ಬಂಧಗಳಿಗೆ ಹೊಂದಿಕೊಂಡಿರುವುವೋ ಅಥವಾ ವಿರುದ್ಧವಾಗಿರುವುವೋ ಎಂಬುದು ಮೂರನೆಯದು. ಒಳಗಿನ ವಾಸನೆಗಳು ವೈಯಕ್ತಿಕ ಮತ್ತು ಸಾಮಾಜಿಕ ಜೀವನಕ್ಕೆ ಅನುಕೂಲವಾಗುವಂತಿದ್ದರೆ, ವ್ಯಕ್ತಿವಿಕಾಸವು ಚೆನ್ನಾಗಿ ಹಾಗೂ ಯೋಗ್ಯವಾಗಿ ಆಗಲಿಕ್ಕೆ ಯಾವ ತೊಂದರೆಯೂ ಇರುವುದಿಲ್ಲ. ಇದರಲ್ಲಿ ವ್ಯತ್ಯಾಸವಾದರೆ ಮನೋರೋಗಗಳುಂಟಾಗುವ ಸಂಭವವು ಹೆಚ್ಚು.

ಮನೋರೋಗಿಗಳ ಇತಿಹಾಸವನ್ನು ಪರೀಕ್ಷಿಸಿ ನೋಡಿದರೆ, ಅವರ ಜೀವನದಲ್ಲಿ ಅನೇಕ ತರದ ಅನನುಕೂಲತೆಗಳುಂಟಾಗಿದ್ದುವೆಂಬುದು ಒಡೆದು ಕಾಣುತ್ತದೆ. ಬಾಲ್ಯದೊಳಗೆ

ಕೌಟುಂಬಿಕ ಜೀವನವು ದುಃಖಮಯವಾಗಿ ಪರಿಣಮಿಸಿರುವುದು ಅಥವಾ ತಾಯಿತಂದೆಗಳ ಪ್ರೀತಿಯಿಂದ ವಂಚಿತನಾಗುವುದು, ಬಡತನವನ್ನನುಭವಿಸುವುದು, ಭಯಂಕರವಾದ ಸಂದರ್ಭಗಳನ್ನು ಎದುರಿಸಬೇಕಾದ ಪ್ರಸಂಗ ಬರುವುದು, ಕಾಮಜೀವನದಲ್ಲಿ ನಿರಾಶನಾಗುವುದು, ಅಧಿಕಾರಸ್ಥಾನವನ್ನು ಕಳೆದುಕೊಳ್ಳುವುದು, ಸಮಾಜದಿಂದ ಉಪೇಕ್ಷಿಸಲ್ಪಡುವುದು, ಎಲ್ಲಿಯೂ ಯಶಸ್ಸು ದೊರೆಯದೆ ಅಯ್ಯೋ ಎಂದೆನ್ನುವ ಅವಕಾಶವುಂಟಾಗುವುದು, ಜೀವನದೊಳಗೆ ಎದುರಿಸಲಿಕ್ಕೆ ಅಶಕ್ಯವೆಂದೆನಿಸುವಂತಹ ಕಠಿನವಾದ ಆಪತ್ತುಗಳೊಳಗೆ ಸಿಕ್ಕಿ ಬೀಳುವುದು ಇವೇ ಮೊದಲಾದ ಕಾರಣಗಳಿಂದ ಅವರ ಮನೋರೋಗಗಳು ತೋರಿಕೊಂಡಿರುತ್ತವೆಂಬುದು ಗೊತ್ತಾಗುತ್ತದೆ.

ದುರ್ದೈವದಿಂದ ಈ ವಿಷಯವನ್ನು ವಿಚಾರ ಮಾಡಿದವರಲ್ಲಿ, ಮನೋರೋಗಗಳು ಹೇಗೆ ಹುಟ್ಟುತ್ತವೆ ಎಂಬ ಬಗೆಗೆ ಇನ್ನೂ ಏಕಮತವಾಗಿಲ್ಲ. ಬೇರೆ ಬೇರೆ ವಿಚಾರವಂತರು ಬೇರೆ ಬೇರೆ ಅಭಿಪ್ರಾಯಗಳನ್ನು ಮುಂದಿಟ್ಟಿರುತ್ತಾರೆ. ಅವುಗಳನ್ನೆಲ್ಲ ಇಲ್ಲಿ ಸಂಪೂರ್ಣವಾಗಿ ವಿವರಿಸುವುದು ಶಕ್ಯವಿಲ್ಲ. ಮುಖ್ಯವಾದ ಕೆಲವು ಮತಗಳನ್ನು ಇಲ್ಲಿ ಸೂಚಿಸುತ್ತೇವೆ.

ಮನೋರೋಗಗಳ ಬಗೆಗೆ ಎಲ್ಲಕ್ಕೂ ಮೊದಲು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವರೆಂದರೆ ಫ್ರಾನ್ಸ್ ದೇಶದ ಜಾನೇ ಮತ್ತು ಶಾರ್ಕೋ ಎಂಬ ಪಂಡಿತರು. ಅವರು ಹೋದ ಶತಮಾನದ ಎರಡನೆಯ ಅರ್ಧದಲ್ಲಿ ಜೀವಿಸಿದ್ದರು. ಅವರ

ಮತದಂತೆ ನಮ್ಮ ಎಲ್ಲ ಮನೋವೃತ್ತಿ ಅಥವಾ ಅವಸ್ಥೆಗಳನ್ನು ಒಂದುಗೂಡಿಸಿ ಸರಿಯಾಗಿ ಸಾಗಿಸಿಕೊಂಡು ಹೋಗಲಿಕ್ಕೆ ಸಾಕಷ್ಟು ಮಾನಸಿಕ ಶಕ್ತಿ ಬೇಕಾಗುತ್ತದೆ. ಅದು ಕಡಿಮೆ ಯಾಯಿತೆಂದರೆ ಮನಸ್ಸಿನ ಐಕ್ಯವು ನಾಶವಾಗುತ್ತದೆ. ಮತ್ತು ಮನಸ್ಸಿನ ಮುಖ್ಯ ಪ್ರವಾಹವು ಒಡೆದು, ಅದರಲ್ಲಿ ಬೇರೆ ಬೇರೆ ಯಾಗಿರುವಂತೆ ತೋರುವ ಹಲವು ಚಿಕ್ಕ ಚಿಕ್ಕ ಪ್ರವಾಹಗಳು ಕಾಣಿಸಿಕೊಳ್ಳುತ್ತವೆ. ಈ ಸ್ಥಿತಿಯನ್ನೇ ನಾವು ಮನೋ ರೋಗವೆಂದು ಕರೆಯುತ್ತೇವೆ.

ಮನೋವಿಶ್ಲೇಷಣ ಶಾಸ್ತ್ರಜ್ಞರ ಮತ: (೧) ಫ್ರಾಯ್‌ಡ್ ಎಂಬ ಪಂಡಿತನ ಹೇಳಿಕೆಯ ಸಾರಾಂಶವು ಈ ರೀತಿಯಾಗಿದೆ: ಪ್ರತಿಯೊಂದು ವ್ಯಕ್ತಿಯ ಕಾಮಜೀವನವು ಅವನು ಹುಟ್ಟಿದ ಕೂಡಲೆ ಪ್ರಾರಂಭವಾಗುತ್ತದೆ. ಹೆಣ್ಣುಕೂಸು ತಂದೆಯನ್ನೂ ಗಂಡುಕೂಸು ತಾಯಿಯನ್ನೂ ಅಪೇಕ್ಷಿಸುತ್ತವೆ. ಇದೇ ಕಾರಣದಿಂದ ಹೆಣ್ಣುಕೂಸಿಗೆ ತಾಯಿಯೂ ಗಂಡುಕೂಸಿಗೆ ತಂದೆಯೂ ಪ್ರತಿಸ್ಪರ್ಧಿಗಳಾಗಿ ತೋರುತ್ತಾರೆ. ಆದರೆ ಈ ವಾಸನೆಯು ಸಮಾಜದ ದೃಷ್ಟಿಯಿಂದ ಅತ್ಯಂತ ಅನೈತಿಕ ವಾದುದೂ ಘಾತುಕವಾದುದೂ ಆಗಿರುತ್ತದೆ. ಆದುದರಿಂದ ಆ ಕೂಸು ಆ ವಾಸನೆಯನ್ನು ಹತ್ತಿಕ್ಕುವ ಪ್ರಯತ್ನ ಮಾಡು ತ್ತದೆ. ಆದರೆ ಆ ವಾಸನೆಯು ಬಹಳ ಪ್ರಬಲವಾದುದು. ಈ ರೀತಿ ಕೂಸಿನ ಮನಸ್ಸಿನಲ್ಲಿ ತಿಕ್ಕಾಟ ಅಥವಾ ಹೋರಾಟ ಪ್ರಾರಂಭವಾಗುತ್ತದೆ. ಹೀಗೆ ಪ್ರಬಲವಾದ ಕಾಮವಾಸನೆಯು ಬಾಲ್ಯದಲ್ಲಿ ಹತ್ತಿಕ್ಕಲ್ಪಟ್ಟು ಮುಂದಿನ ಜೀವನದೊಳಗೆ ಮನೋ

ೋಗಗಳ ರೂಪದಿಂದ ಹೊರಬೀಳುತ್ತದೆ. ಕೂಸು ಐದಾರು
ರುಷದ್ದಾಗುವುದರೊಳಗಾಗಿ ಇದೆಲ್ಲ ಆಗಿಹೋಗುತ್ತದೆ.
೨) ಆ್ಯಡ್ಲರ್ ಎಂಬವನು ಮೊದಮೊದಲು ಫ್ರಾಯ್‌ಡನ
ನುಯಾಯಿಯಾಗಿದ್ದರೂ ಆಮೇಲೆ ತನ್ನದೇ ಆದ ಒಂದು
ಹೊಸ ಸಿದ್ಧಾಂತವನ್ನು ಸ್ಥಾಪಿಸಿದನು. ಇಂದು ಸುಶಿಕ್ಷಿತ
ನಿಸಿಕೊಳ್ಳುವ ಆಂಗ್ಲ ವಿದ್ಯಾವಂತರಲ್ಲಿ ಕೀಳುತನದ ಭಾವ
ಥವಾ ನೈಚ್ಯಭಾವ ( Inferiority Complex ) ಎಂಬ
ಬ್ದವು ಬಹಳವಾಗಿ ಬಳಕೆಯಲ್ಲಿ ಬಂದಿರುವುದಷ್ಟೆ. ಅದು
್ಯಡ್ಲರನ ಶಬ್ದ. ವ್ಯಕ್ತಿಯು ತನ್ನಲ್ಲಿ ಕಂಡುಬರುವ ಯಾವು
ಾದರೊಂದು ನ್ಯೂನತೆಯ ವಿಷಯವಾಗಿ ಮನಸ್ಸಿಗೆ ಬಹಳ
ಾಗಿ ಹಚ್ಚಿಕೊಳ್ಳುತ್ತಾನೆ. ಈ ಕಡಿಮೆತನವನ್ನು ಬೇರೊಂದು
ೀತಿಯಿಂದ ತುಂಬಿಕೊಳ್ಳಲು ಯತ್ನಿಸುತ್ತಾನೆ. ಮತ್ತೆ ಮತ್ತೆ
ೀಡಿಸುವ ಈ ಕೀಳುತನದ ಭಾವವನ್ನು ಮರೆಯುವುದಕ್ಕಾಗಿ
ಅವನ ಮನಸ್ಸು ಬಹಳ ಶ್ರಮಪಡಬೇಕಾಗುತ್ತದೆ. ಈ ಹೋರಾಟ
ದಲ್ಲಿ ಮನಸ್ಸು ಒಮ್ಮೊಮ್ಮೆ ಮನೋರೋಗಗಳಿಗೆ ಈಡಾಗು
ತ್ತದೆ. ಉದಾಹರಣೆಗೆ, ಜರ್ಮನಿಯ ಸುಪ್ರಸಿದ್ಧ ಬಾದಶಹ
ಾದ ಕೈಸರನ ಒಂದು ಕೈ ಊನವಾಗಿತ್ತು. ಅದರಿಂದ ಅವ
ನಲ್ಲಿ ನೈಚ್ಯಭಾವನೆಯುಂಟಾಗಿ, ಅದರ ಸೇಡನ್ನು ಬೇರೆ ರೀತಿ
ಯಲ್ಲಿ ತೀರಿಸಿಕೊಳ್ಳುವ ಮಹತ್ವಾಕಾಂಕ್ಷೆಯು ಅವನಲ್ಲಿ
ಉದಯಿಸಿತು. ಯಾರ ಮಾತನ್ನೂ ತಾನು ಕೇಳಬಾರದು;
ಎಲ್ಲರನ್ನೂ ತನ್ನ ಅಂಕಿತದಲ್ಲಿಟ್ಟುಕೊಳ್ಳಬೇಕು; ಎಲ್ಲರಿಗಿಂತಲೂ
ತಾನು ಶ್ರೇಷ್ಠನೆಂದೆನಿಸಿಕೊಳ್ಳಬೇಕು; ಎಂದರೆ ಊನವಾದ

ಕೈಯಿದ್ದರೂ ತಾನು ಶ್ರೇಷ್ಠನಾದಂತಾಗುವುದು—ಎಂದು ಅ
ಸಿಗೆ ಎನಿಸಿತು. ಈ ಭಾವನೆಯಿಂದಲೇ ಅವನು ತನ್ನ ಹ
ವನ್ನು ಸಾಧಿಸಹೋಗಿ ಮೊದಲನೆಯ ಜಾಗತಿಕ ಯುದ್ಧಕ
ಕಾರಣನಾದನು. (೩) ಯೂಂಗನೆಂಬವನು ಸಹ ಮೊದಲ
ಫ್ರಾಯ್‌ಡನ ಅನುಯಾಯಿಯೇ ಆಗಿದ್ದನು. ಆತನ ಮ
ದಂತೆ ವ್ಯಕ್ತಿಯು ತತ್ಕಾಲದಲ್ಲಿ ತನ್ನ ಜೀವನದೊಳಗೆ ಬಂದಿರುವ
ಘೋರ ಪ್ರಶ್ನೆಗಳನ್ನು ಎದುರಿಸಲಾರದೆ ಮನೋರೋಗಗಳಿಗೆ
ಈಡಾಗುವನು.

ಇಂದಿನ ಮಾನಸಶಾಸ್ತ್ರಜ್ಞರ ಮತ: ಮೇಲಿನ ಅಭಿ
ಪ್ರಾಯಗಳು ಏಕದೇಶೀಯವಾದವುಗಳೆಂಬ ಕಾರಣದಿಂದ
ಅಗ್ರಾಹ್ಯವಾಗಿವೆ. ಈಗಿನ ಮಾನಸಶಾಸ್ತ್ರಜ್ಞರಲ್ಲಿ ಹೆಚ್ಚು
ಜನರು ಮನೋರೋಗಗಳ ಉತ್ಪತ್ತಿಯನ್ನು ಬೇರೆ ರೀತಿಯಲ್ಲಿ
ಹೇಳುತ್ತಾರೆ. ಮ್ಯಾಕ್‌ಡೂಗಲ್ (McDougall) ಎಂಬ
ವರ ಅಭಿಪ್ರಾಯದಂತೆ ನಮ್ಮ ವಾಸನೆ ಅಥವಾ ಬಯಕೆಗಳು
ಪರಸ್ಪರ ವಿರುದ್ಧವಾಗಿದ್ದರೆ, ಅವುಗಳಲ್ಲಿ ಹೋರಾಟವು ಅಪರಿ
ಹಾರ್ಯವಾಗುತ್ತದೆ. ಈ ವಾಸನೆಗಳೂ ಅವುಗಳೊಳಗಿನ
ಹೋರಾಟವೂ ನಮಗೆ ಗೊತ್ತಾಗಬಹುದು ಅಥವಾ ಆಗಲಿ
ಕ್ಕಿಲ್ಲ. ಯಾವ ಮನುಷ್ಯನಲ್ಲಿ ಶೀಲಸಂವರ್ಧನೆಯು ಸರಿ
ಯಾಗಿ ಆಗಿ, ವಾಸನೆವಾಸನೆಗಳಲ್ಲಿ ಬಡಿದಾಟವಿರುವುದಿಲ್ಲವೋ
ಅವನು ನಿಜವಾಗಿಯೂ ಸುದೈವಿ, ಧನ್ಯ ಆತನು ಜೀವನದಲ್ಲಿ
ಯಾವುದಾದರೊಂದು ಘನೋದ್ದೇಶವನ್ನಿಟ್ಟುಕೊಂಡಿರುವಾಗ,
ಉಳಿದೆಲ್ಲ ವಾಸನೆಗಳು ಅದಕ್ಕೆ ಅನುಕೂಲವಾಗಿ ಕೆಲಸ

ಮಾಡಹತ್ತಿದರೆ, ಅಂಥ ಮನುಷ್ಯನು ಸುಖಿಯಾಗುವನು. ಆದರೆ ಇದು ಎಲ್ಲರಿಗೂ ಸಾಧ್ಯವಾಗುವ ಮಾತಲ್ಲ. ನಮ್ಮ ವಾಸನೆಗಳಲ್ಲಿ ಸಾಮರಸ್ಯವನ್ನು ಹೇಗೆ ಸಾಧಿಸಬೇಕೆಂಬುದನ್ನು ಕಲಿಸುವುದೇ ಶಿಕ್ಷಣದ ಮುಖ್ಯ ಉದ್ದೇಶವಾಗಿದೆ.

ಸಮಾಜ ಹಿತಕ್ಕೆ ವಿರುದ್ಧವಾಗಿದ್ದರೆ, ಅತ್ಯಂತ ಪ್ರಬಲ ವಾದ ವಾಸನೆಗಳನ್ನೂ ನಾವು ನಿಗ್ರಹಿಸಬೇಕಾಗುತ್ತದೆ. ಸಮಾಜದೊಡನೆ ಹೊಂದಿಕೊಂಡಿರಬೇಕೆಂಬ ವಾಸನೆಯಿಂದ ಅವು ದಮನ ಮಾಡಲ್ಪಡುತ್ತವೆ. ಹೀಗೆ ಬಲಾತ್ಕಾರದಿಂದ ನಿರೋಧಿಸಲ್ಪಟ್ಟ, ಆದರೂ ಜೀವಂತವಾಗಿರುವ, ಅತೃಪ್ತ ವಾಸನೆಗಳೇ ಮನೋರೋಗಗಳಿಗೆ ಬೀಜವಾಗಿರುತ್ತವೆ. ಈ ನಿರೋಧವು ಬಹುಶಃ ನಮ್ಮ ಜಾಗ್ರತ್ ಪ್ರಜ್ಞೆಗೆ ಗೊತ್ತಾಗದಂತೆ ನಡೆಯುತ್ತದೆ. ಸಾರಾಂಶವೇನೆಂದರೆ ವಾಸನೆಗಳೊಳಗಿನ ಹೋರಾಟ ಮತ್ತು ಅವುಗಳ ನಿರೋಧವೇ ಮನೋರೋಗ ಗಳಿಗೆ ಕಾರಣ. ನಿರೋಧವಿಲ್ಲದೆ ಬರಿಯ ಹೋರಾಟ ನಡೆ ದರೆ ಮನೋರೋಗವು ಹುಟ್ಟಬಹುದೋ ಹೇಗೆ ಎಂಬ ಬಗೆಗೆ ಸಂದೇಹವಿದೆ.



## ೫. ಉಪಚಾರ

ಹಿಂದಿನ ಅಧ್ಯಾಯದಲ್ಲಿ ವರ್ಣಿಸಿದಂತೆ ಮಾನಸಿಕ ರೋಗಗಳಿಂದ ಬಳಲುತ್ತಿರುವವರನ್ನು ಉಪಚರಿಸಿ, ಸರಿಗೊಳಿಸುವ ಶಾಸ್ತ್ರಕ್ಕೆ ಮಾನಸೋಪಚಾರಶಾಸ್ತ್ರ (Psycho-therapy) ವೆಂದು ಹೆಸರು. ಈ ಅಭ್ಯಾಸವು ಈಗ ಪಾಶ್ಚಾತ್ಯರಲ್ಲಿ ದಿನದಿನಕ್ಕೆ ಬೆಳೆಯುತ್ತ ನಡೆದಿದೆ. ಅದರ ಎಲ್ಲ ವಿವರಗಳನ್ನು ಇಲ್ಲಿ ಕೊಡುವುದು ಸಾಧ್ಯವಿಲ್ಲ ಮುಖ್ಯವಾದ ಕೆಲವು ವಿಷಯಗಳನ್ನು ಮಾತ್ರ ಕುರಿತು ತುಸು ಬರೆಯುವೆವು.

ಮಾನವನಲ್ಲಿ ಕೆಲವು ಸಹಜವಾದ ಪ್ರವೃತ್ತಿಗಳಿರುತ್ತವೆ. ಅವುಗಳಿಗೆ ಆನುಷಂಗಿಕವಾಗಿ ಮತ್ತೆ ಕೆಲವು ವಾಸನೆ ಅಥವಾ ಇಚ್ಛೆಗಳು ಹುಟ್ಟುತ್ತವೆ. ಅವು ಅತೃಪ್ತವಾಗಿ ಹತ್ತಿಕ್ಕಲ್ಪಟ್ಟೊಡನೆ ಮನೋರೋಗಗಳು ಉಂಟಾಗುತ್ತವೆ. ಪ್ರತಿಯೊಂದು ಬಯಕೆಯ ಜೊತೆಗೆ ಮಾನಸಿಕ ಶಕ್ತಿ ಅಥವಾ ಸಾಮರ್ಥ್ಯವು ಕೂಡಿಕೊಂಡಿರುತ್ತದೆ. ಅದರಿಂದಲೇ ಮಾನವನಿಗೆ ಕೆಲಸ ಮಾಡುವ ಹುರುಪು ಅಥವಾ ಉತ್ಸಾಹ ಬರುತ್ತದೆ. ಬೇಕಾದ ಸಾಹಸ ಮಾಡುವುದು ಶಕ್ಯವಾಗುತ್ತದೆ. ಯಾವುದೊಂದು ವಾಸನೆ ಅಥವಾ ಪ್ರವೃತ್ತಿ ಉದ್ದೀಪಿತವಾಯಿತೆಂದರೆ, ಅದರ ಧ್ಯೇಯ ಸಾಧನೆಗಾಗಿ ಅದರ ಜೊತೆಗಿದ್ದ ಶಕ್ತಿ

ಅಥವಾ ಉತ್ಸಾಹವೂ ಹೊರಬೀಳುತ್ತದೆ. ಸಿಟ್ಟು ಬಂದು ಏನಾದರೂ ಮಾಡಬೇಕೆಂದೆನಿಸಿದರೆ, ಆ ಕೆಲಸವನ್ನು ಪೂರೈಸ ಲಿಕ್ಕೆ ಬೇಕಾಗುವ ವಿಶೇಷ ಶಕ್ತಿಯು ಆ ಸಿಟ್ಟಿನೊಡನೆ ಉದಯ ವಾಗುತ್ತದೆ. ಇದನ್ನು ಒಂದು ಉದಾಹರಣೆಯಿಂದ ತಿಳಿಸಿ ಕೊಡಬಹುದು. ವಾಸನೆಗಳಿಂದ ಕೂಡಿದ ಮನಸ್ಸನ್ನು ಹರಿ ಯುವ ನೀರಿನ ಪ್ರವಾಹಕ್ಕೆ ಹೋಲಿಸಬಹುದು. ನೀರಿನೊಳಗೆ ಹರಿಯುವ ಶಕ್ತಿ ಸಹಜವಾಗಿರುವಂತೆ, ವಾಸನೆಯೊಳಗೆ ಮಾನವ ವ್ಯಕ್ತಿಯನ್ನು ಪ್ರೇರಿಸುವ ಶಕ್ತಿ ಸಹಜವಾಗಿದೆ. ನೀರಿನ ಪ್ರವಾಹವನ್ನು ಪ್ರತಿಬಂಧಿಸಿದರೆ, ಆ ನೀರು ಮಲೆತು ನಿಂತು, ಸುತ್ತಲೆಲ್ಲ ಸಿಕ್ಕಂತೆ ಹಬ್ಬಿ, ಜವುಳನ್ನುಂಟುಮಾಡಿ, ಮಲೇ ರಿಯಾ ಮೊದಲಾದ ರೋಗಗಳನ್ನು ಹುಟ್ಟಿಸುತ್ತದೆ. ಹಾಗೆಯೇ ಅತೃಪ್ತವಾದ ವಾಸನೆಗಳಿಂದ ಮನಃಸ್ವಾಸ್ಥ್ಯವು ಕೆಡುವುದು. ನೀರಿನ ಪ್ರವಾಹವನ್ನು ಒಂದೇ ಕಡೆಗೆ ಮಲೆತು ನಿಲ್ಲಗೊಡದೆ ಬೇರೆ ಕೆಲಸಗಳಿಗಾಗಿ ಉಪಯೋಗಿಸಿಕೊಳ್ಳುವಂತೆ, ವಾಸನೆ ಗಳ ಶಕ್ತಿಯನ್ನು ಸಮಾಜಹಿತಕ್ಕಾಗಿ ಉಪಯೋಗಿಸುವುದು ಶಕ್ಯವಿದೆ. ಹೀಗೆ ಮಾಡುವ ಕ್ರಿಯೆಯನ್ನು ಉದಾತ್ತೀಕರಣ (Sublimation) ಎಂದು ಕರೆಯುತ್ತಾರೆ.

ವಾಸನೆಗಳ ಶಕ್ತಿಯು ತನಗುಚಿತವಾದ ದಾರಿಯನ್ನು ಹಿಡಿದು ಹೋಗಲು ಯತ್ನಿಸುತ್ತದೆ. ಆ ದ್ವಾರವು ಕಟ್ಟಿ ಹೋದೊಡನೆ, ಆ ಶಕ್ತಿಯು ಬೇರೆ ರೀತಿಯಿಂದ ಹೊರ ಬೀಳಲು ಯತ್ನಿಸುತ್ತದೆ. ಹೀಗೆ ಅವ್ಯವಸ್ಥಿತವಾದ ಮತ್ತು ಅನೈಸರ್ಗಿಕವಾದ ರೀತಿಯಲ್ಲಿ ಅದು ಹೊರಬೀಳಹತ್ತುವುದೇ

ಮನೋರೋಗ. ಮನೋರೋಗಗಳ ಈ ಉತ್ಪತ್ತಿಯನ್ನು ಮನಸ್ಸಿನಲ್ಲಿಟ್ಟರೆ, ಅವುಗಳ ಉಪಚಾರದ ಮಾರ್ಗವು ಗೊತ್ತಾಗುತ್ತದೆ.

ಯಾವ ಪ್ರವೃತ್ತಿ ಅಥವಾ ವಾಸನೆಯ ಶಕ್ತಿಯು ದಮನ ಮಾಡಲ್ಪಟ್ಟು ಮನೋರೋಗವನ್ನು ಹುಟ್ಟಿಸಿರುವುದೋ, ಅದನ್ನು ಶೋಧಿಸುವುದು ಮೊದಲನೆಯ ಕೆಲಸ. ವಾಸನಾ ನಿರೋಧವು ಸಾಮಾನ್ಯವಾಗಿ ಜಾಗ್ರತ್‌ಪ್ರಜ್ಞೆಗೆ ಗೊತ್ತಾಗದಂತೆ ಒಳಗಿಂದೊಳಗೇ (subconsciously or unconsciously) ನಡೆದಿರುತ್ತದೆ. ಎಂತೆಯೇ ಮನೋರೋಗಿಗೆ ತನಗೆ ಹೀಗೇಕೆ ಆಗುತ್ತಿರುವುದೆಂಬುದರ ಅರಿವೇ ಇರುವುದಿಲ್ಲ. "ನೀನು ಹೀಗೇಕೆ ಮಾಡುವೆ ?" ಎಂದು ಯಾರಾದರೂ ಕೇಳಿದರೆ, ಅವನು ಉತ್ತರವನ್ನು ಕೊಡಲಾರನು. ಆಶ್ಚರ್ಯದ ಆದರೆ ಅನುಭವಸಿದ್ಧವಾದ ಮಾತೆಂದರೆ ಅವನಿಗೆ ಅಜ್ಞಾತವಾಗಿದ್ದ ಆ ರೋಗದ ಕಾರಣವನ್ನು ರೋಗಿಯು ಈಗಿನ ಜಾಗ್ರತ್‌ಪ್ರಜ್ಞೆಗೆ ತಂದುಕೊಟ್ಟೊಡನೆ, ಆ ರೋಗವೇ ನಾಶವಾಗಿ ಹೋಗುತ್ತದೆ. ಎಂದರೆ ರೋಗಿಗೆ ಗೊತ್ತಾಗದಂತೆ ಎಲ್ಲಿಯ ವರೆಗೆ ನಿರೋಧವು ತೆರೆಯ ಮರೆಯಲ್ಲಿ ನಡೆದಿರುವುದೋ ಅಲ್ಲಿಯ ವರೆಗೆ ಅದರ ಸಾಮರ್ಥ್ಯ. ರೋಗಿಯು ಅದರ ಮುಂದೆ ಸಾಕ್ಷಾತ್ತಾಗಿ ನಿಂತೊಡನೆ, ಕದ್ದ ವಸ್ತು ಸಹಿತ ಸಿಕ್ಕಿದ ಕಳ್ಳನಂತೆ, ರೋಗದ ಮುಖಭಂಗವಾಗುತ್ತದೆ.

ರೋಗೋತ್ಪಾದಕ ಕಾರಣವನ್ನು ಹುಡುಕುವುದು ಹೇಗೆ ಎಂಬ ಪ್ರಶ್ನೆ ಈಗ ತಲೆಯೆತ್ತುತ್ತದೆ. ಅದಕ್ಕಾಗಿ ಮನೋ

ವಿಶ್ಲೇಷಣ ಶಾಸ್ತ್ರಜ್ಞರು ಕೆಲವು ಸಾಧನಗಳನ್ನು ಹುಡುಕಿ ತೆಗೆದಿದ್ದಾರೆ (೧) ವಶ್ಯನಿದ್ರೆ (Hypnotism) ಮೊದಲನೆಯದು. ಜನರನ್ನು ವಶ್ಯನಿದ್ರೆಗೆ ಒಳಪಡಿಸುವ ಯುಕ್ತಿಯನ್ನು ಫ್ರಾಯ್‌ಡನೇನೂ ಹೊಸದಾಗಿ ಹುಡುಕಿ ತೆಗೆಯಲಿಲ್ಲ. ಅವನಿಗಿಂತಲೂ ಅದು ಮೊದಲೇ ಗೊತ್ತಿತ್ತು. ಆದರೆ ಮನೋರೋಗಗಳ ಚಿಕಿತ್ಸೆಗಾಗಿ ಅವನು ಅದನ್ನು ವ್ಯವಸ್ಥಿತವಾಗಿ ಉಪಯೋಗಿಸಹತ್ತಿದನು. ಡಾಕ್ಟರ್ ಬ್ರಾಯರ್ ಎಂಬ ಪಂಡಿತನಿಗೆ ಅದು ಅಕಸ್ಮಾತ್ತಾಗಿ ಗೊತ್ತಾಗಿತ್ತು. ಅದನ್ನೇ ಫ್ರಾಯ್‌ಡನು ಮುಂದುವರಿಸಿದನು. ವಶ್ಯನಿದ್ರೆಗೆ ಒಳಗಾದ ರೋಗಿಗಳ ಜ್ಞಾಪಕಶಕ್ತಿಯು ಬಹಳವಾಗಿ ಹಿಗ್ಗುತ್ತದೆ. ಅವರಿಗೆ ಸೂಚನೆ ಕೊಟ್ಟೊಡನೆ ಹಿಂದಿನ ಎಲ್ಲ ಅನುಭವಗಳು ಅವರಿಗೆ ಕ್ರಮೇಣ ನೆನಪಾಗಹತ್ತುತ್ತವೆ. ಈ ರೀತಿ ಯಾವ ಅಜ್ಞಾತ ಕಾರಣವು ಮನೋರೋಗವನ್ನು ಹುಟ್ಟಿಸಿತೋ, ಅದನ್ನು ಕಂಡುಹಿಡಿದು, ರೋಗಿಯು ವಶ್ಯನಿದ್ರೆಯಿಂದ ಎಚ್ಚತ್ತ ಮೇಲೆ, ಅವನ ಸ್ಮರಣೆಗೆ ಅದನ್ನು ತಂದುಕೊಡಲು ರೋಗವು ನಾಶವಾಗಿಬಿಡುತ್ತದೆ. ಇಷ್ಟೇ ಅಲ್ಲ, ಎಚ್ಚರಿಕೆಯೊಳಗೆ ಸಹಸಾ ಆಗದಂತಹ ಕೆಲಸಗಳನ್ನೂ ವಶ್ಯನಿದ್ರೆಗೆ ಒಳಗಾದವರ ಕಡೆಯಿಂದ ಮಾಡಿಸಬಹುದು. ಒಬ್ಬ ಮನೋರೋಗಿಯು ಸ್ನಾಯುಗಳ ಸಂಕೋಚದಿಂದ ಬಳಲುತ್ತಿರುವನೆಂದು ಕಲ್ಪಿಸುವ. ಎಚ್ಚರಿಕೆಯಲ್ಲಿ ಅವಯವವನ್ನು ಹಿಗ್ಗಿಸುವುದು ಅವನಿಗೆ ಸಾಧ್ಯವಿರುವುದಿಲ್ಲ. ಆದರೆ ವಶ್ಯನಿದ್ರೆಯ ಸ್ಥಿತಿಯಲ್ಲಿ ಅವನಿಗೆ ಸೂಚನೆ ಕೊಟ್ಟು ಆ ಕೆಲಸವನ್ನು

ಮಾಡಿಸಬಹುದು. ಅದರಿಂದ ಸ್ನಾಯುಗಳು ಮತ್ತೆ ಮೊದಲಿನಂತೆ ಸಂಕೋಚವಿಕಾಸಗಳನ್ನು ಮಾಡಲು ಸಮರ್ಥವಾಗುತ್ತವೆ. (೨) ಮೊದಮೊದಲು ವಶ್ಯನಿದ್ರಾಪದ್ಧತಿಯನ್ನು ಫ್ರಾಯ್‌ಡನು ಅನುಸರಿಸುತ್ತಿದ್ದರೂ ಮುಂದೆ ಅದು ಅಷ್ಟು ಗುಣಕಾರಿಯಲ್ಲವೆನಿಸಿತು. ವಶ್ಯನಿದ್ರೆಯಿಂದ ತತ್ಕಾಲದಲ್ಲಿ ಗುಣವಾದಂತೆ ಕಂಡರೂ ಶಾಶ್ವತವಾದ ರೋಗನಾಶವಾಗುತ್ತಿರಲಿಲ್ಲ. ಅದಕ್ಕಾಗಿ ಫ್ರಾಯ್‌ಡನು ಮತ್ತೊಂದು ಪದ್ಧತಿಯನ್ನು ಅವಲಂಬಿಸಿದನು. ಅದನ್ನು "ಸಹಜವಿಚಾರಸರಣಿ"ಯ (Free Association) ರೀತಿ ಎಂದು ಕರೆಯಬಹುದು. ರೋಗಿಯು ಸುಖಾಸೀನನಾಗಿ ದೇಹೇಂದ್ರಿಯಗಳನ್ನು ಸಡಿಲಿಸಿ ಕುಳಿತುಕೊಳ್ಳಬೇಕು. ಆ ಮೇಲೆ ತನ್ನ ಮನೋವೃತ್ತಿಯನ್ನು ಒಳಕ್ಕೆ ಹೊರಳಿಸಿ, ತನ್ನ ಮನಸ್ಸಿನಲ್ಲಿ ಏನೇನು ವಿಚಾರ ಅಥವಾ ಕಲ್ಪನೆ ಬರುತ್ತದೆಯೋ ಅದನ್ನು ಇದ್ದಕ್ಕಿದ್ದಂತೆ ಎಷ್ಟೂ ತಪ್ಪದೆ ತನ್ನ ಮಾನಸೋಪಚಾರಕನಿಗೆ ಹೇಳುತ್ತ ಹೋಗಬೇಕು. ಈ ಕ್ರಮವು ಅನೇಕ ದಿನಗಳವರೆಗೆ— ಅದೇಕೆ, ಅನೇಕ ತಿಂಗಳುಗಳವರೆಗೆ— ನಡೆಯಬೇಕು. ಎಂದರೆ ಕೊನೆಗೆ ರೋಗಜನಕ ಸಂಗತಿಯು ಹೊರಬೀಳುವುದು. (೩) "ಸಹಜವಿಚಾರಸರಣಿ"ಯ ಕ್ರಮ ನಡೆದಾಗ ಸ್ವಪ್ನಗಳ ಸಹಾಯವನ್ನೂ ಪಡೆಯಬಹುದು. ಅತೃಪ್ತವಾದ ವಾಸನೆಗಳೆಲ್ಲ ಕನಸಿನೊಳಗೆ ಹೊರಬಿದ್ದು ಅಪ್ರತ್ಯಕ್ಷವಾಗಿಯಾದರೂ ತೃಪ್ತವಾಗುವುವೆಂದು ಫ್ರಾಯ್‌ಡನ ಸಿದ್ಧಾಂತ. ಆದುದರಿಂದ ಕನಸುಗಳಿಗೆ ಸರಿಯಾದ

ಅರ್ಥವನ್ನು ಮಾಡಲಿಕ್ಕೆ ಕಲಿತರೆ, ಮೂಲ ರೋಗಜನಕವಾದ ಘಟನೆಯನ್ನು ಗೊತ್ತುಹಿಡಿಯಬಹುದು. ( ೪ ) ಯೂಂಗ ನೆಂಬ ಮನೋವಿಶ್ಲೇಷಣ ಶಾಸ್ತ್ರಜ್ಞನು ಈ ವಿಷಯದಲ್ಲಿ ತನ್ನದೇ ಆದ ಒಂದು ಹೊಸಪದ್ಧತಿಯನ್ನು ಹೇಳಿಕೊಟ್ಟಿದ್ದಾನೆ. ಅವನ ತಂತ್ರವನ್ನು " ಶಬ್ದಸಾಹಚರ್ಯ " (Word-Asso-ciation) ವೆಂದು ಕರೆಯಬಹುದು. ಅನುಭವದಿಂದ ಉಪ ಯುಕ್ತವೆಂದು ಕಂಡುಹಿಡಿಯಲ್ಪಟ್ಟ ಕೆಲವು ವಿಶಿಷ್ಟ ಶಬ್ದ ಗಳನ್ನು ಆರಿಸಿ ತೆಗೆಯಬೇಕು. ಕ್ರಮವಾಗಿ ಅವುಗಳ ಪಟ್ಟಿ ಯೊಂದನ್ನು ಬರೆದಿಡಬೇಕು. ರೋಗಿಯ ಮುಂದೆ ಅವು ಗಳನ್ನು ಒಂದೊಂದಾಗಿ ಉಚ್ಚಾರ ಮಾಡುತ್ತ ಹೋಗಬೇಕು. ಒಂದೊಂದು ಶಬ್ದವನ್ನು ಉಚ್ಚಾರ ಮಾಡಿದೊಡನೆ ರೋಗಿಯ ಮನಸ್ಸಿನಲ್ಲಿ ಯಾವ ಯಾವ ವಿಚಾರಗಳು ಬರುತ್ತವೆಂಬು ದನ್ನು ಕೇಳಿ ಬರೆದಿಡಬೇಕು. ಶಬ್ದವನ್ನು ಕೇಳಿದ ಬಳಿಕ ಎಷ್ಟು ವೇಳೆಯ ಮೇಲೆ ಅವನು ಉತ್ತರ ಕೊಡುತ್ತಾನೆಂಬು ದನ್ನು ಅತಿ ಸೂಕ್ಷ್ಮವಾದ ( ಸೆಕಂಡಿನ ೧/೫ ಭಾಗವನ್ನು ಸಹ ಅಳೆಯಬಲ್ಲ ) ಗಡಿಯಾರದ ಸಹಾಯದಿಂದ ಅವಲೋಕಿಸ ಬೇಕು; ಹೀಗೆ ಆಯಾ ಶಬ್ದಗಳಿಂದ ರೋಗಿಗಳ ಮನಸ್ಸಿನ ಮೇಲೆ ಯಾವ ತರದ ಪರಿಣಾಮಗಳಾಗುವುವೆಂಬುದನ್ನು ನಿರೀಕ್ಷಿಸಿ, ಅದರ ಆಧಾರದಿಂದ ಅವರ ಮನೋರೋಗಗಳ ಕಾರಣವನ್ನು ಹುಡುಕಿ ತೆಗೆಯುವುದು ಸಾಧ್ಯ.

ಮೇಲೆ ಹೇಳಿದವುಗಳು ಮನೋವಿಶ್ಲೇಷಣ ಶಾಸ್ತ್ರಜ್ಞರ ಸಾಧನಗಳು. ವಶ್ಯನಿದ್ರೆಯನ್ನು ಉಳಿದ ಮಾನಸೋಪಚಾರ

ಶಾಸ್ತ್ರಜ್ಞರೂ ಅವಲಂಬಿಸುವುದು ಕಂಡುಬರುತ್ತದೆ. ಆದರೂ ಅದು ಜನರಿಗೆ ಅಷ್ಟು ಪ್ರಿಯವಾಗಿರುವುದಿಲ್ಲ. ಅದರ ಬಗೆಗೆ ಜನರಲ್ಲಿ ಒಂದು ತರದ ಜುಗುಪ್ಸೆಯು ಇರುತ್ತದೆ. ಅದರ ಗುಣಗಳೂ ಅಷ್ಟು ಸ್ಪಷ್ಟವಾಗಿ ಎದ್ದು ಕಾಣುವುದಿಲ್ಲ. ಈ ಕಾರಣಗಳಿಂದ ಅದು ಬರಬರುತ್ತ ಅಗ್ರಾಹ್ಯವಾಗಹತ್ತಿದೆ. ಆದರೂ ಮೊದಲನೆಯ ಜಾಗತಿಕ ಯುದ್ಧದಲ್ಲಿ ಮನೋರೋಗಗಳಿಂದ ಬಳಲುತ್ತಿದ್ದ ಅಸಂಖ್ಯ ರೋಗಿಗಳನ್ನು ವಶ್ಯನಿದ್ರಾ ಪದ್ಧತಿಯಿಂದ ಗುಣಪಡಿಸಲಾಯಿತೆಂಬುದನ್ನು ಮರೆಯುವಂತಿಲ್ಲ.

ಸೂಚನಾಪದ್ಧತಿಯು (Suggestion) ಎರಡನೆಯದು. ವಶ್ಯನಿದ್ರೆಯಲ್ಲಿ ಕೂಡ ಸೂಚನೆಗಳನ್ನು ಕೊಡಬೇಕಾಗುವುದೆಂಬುದನ್ನು ಮೇಲೆ ನೋಡಿದೆವು. ಆದರೆ ವಶ್ಯನಿದ್ರೆಯ ಸಹಾಯವಿಲ್ಲದೆ ಬರಿಯ ಸೂಚನಾಪದ್ಧತಿಯಿಂದಲೂ ರೋಗಿಗಳನ್ನು ಗುಣಪಡಿಸಬಹುದಾಗಿದೆ. ಸೂಚನೆಯೆಂದರೆ ಒಬ್ಬರ ಮನಸ್ಸಿನೊಳಗಿರುವ ವಿಚಾರಗಳನ್ನು ಮತ್ತೊಬ್ಬರ ಮನಸ್ಸಿಗೆ ಸಾಗಿಸುವ ಕ್ರಿಯೆ. ಆದರೆ ಇದಕ್ಕಾಗಿ ತರ್ಕಸರಣಿ ಅಥವಾ ನ್ಯಾಯಸಮ್ಮತವಾದ ಪದ್ಧತಿಯನ್ನು ಅವಲಂಬಿಸಲಾಗದು. ಸೂಚನೆಯಲ್ಲಿ ಒಬ್ಬನ ವಿಚಾರಗಳನ್ನು ಮತ್ತೊಬ್ಬನು ವಿಚಾರವಿಲ್ಲದೆ, ವಿಮರ್ಶೆಮಾಡದೆ ಸ್ವೀಕರಿಸುತ್ತಾನೆ. ತಂದೆತಾಯಿಗಳ ಮಾತನ್ನು ಮಕ್ಕಳೂ ಗುರುವಿನ ಮಾತನ್ನು ಶಿಷ್ಯರೂ ಈ ರೀತಿಯಲ್ಲಿ ಸ್ವೀಕರಿಸಬಹುದಾಗಿದೆ. ಕೇವಲ ಶ್ರದ್ಧೆ ಅಥವಾ ವಿಶ್ವಾಸದಿಂದ ನಾವು ಮತ್ತೊಬ್ಬರ ವಿಚಾರಗಳನ್ನು ಆದರಿಸು

ವುದು ಸೂಚನಾಪದ್ಧತಿಯ ವೈಶಿಷ್ಟ್ಯ. ಸ್ಪಷ್ಟವಾಗಿ ಹೇಳಿದರೆ ಯಾವ ಮಾತನ್ನು ಕೆಲವರು ನಂಬಲಾರದವರಾಗಿರುವರೋ ಅವರ ಮೇಲೆ ಒಳ್ಳೆಯ ಕೌಶಲ್ಯದಿಂದ ಈ ಸೂಚನಾಕ್ರಮವನ್ನು ಉಪಯೋಗಿಸಿ, ಅವರು ನಮ್ಮ ಮಾತುಗಳನ್ನು ಸುಲಭವಾಗಿ ನಂಬುವಂತೆ ಮಾಡಬಹುದು. ಹಿಟ್ಲರ್, ಗೋಬೆಲ್ಸ್ ಮೊದಲಾದವರ ಪ್ರಚಾರಪದ್ಧತಿಯ ರಹಸ್ಯವು ಈ ಸೂಚನಾಪದ್ಧತಿಯಲ್ಲಿದೆ. ಅದರಂತೆ ಮಾನಸೋಪಚಾರ ಶಾಸ್ತ್ರಜ್ಞನು ಮನೋರೋಗಿಗೆ ಸರಿಯಾದ ಸೂಚನೆಗಳನ್ನು ಜಾಣತನದಿಂದ ಮಾಡಿ ಗುಣಪಡಿಸಬೇಕು.

ಆದರೆ ಸೂಚನೆ ಕೂಡ ಅಷ್ಟು ಫಲಕಾರಿಯಾಗಲಾರದೆಂಬುದು ಸ್ಪಷ್ಟವಿದೆ. ರೋಗಿಯ ಮನಸ್ಸಿನಲ್ಲಿ ಡಾಕ್ಟರನ ಬಗೆಗೆ ಬಹಳ ಶ್ರದ್ಧೆವಿಶ್ವಾಸಗಳಿದ್ದಾಗ ಮಾತ್ರ ಇದರ ಉಪಯೋಗವಾಗುವುದು. ಆದರೆ ರೋಗಿಯ ಮನಸ್ಸಿನಲ್ಲಿ ಶ್ರದ್ಧೆಯಾದರೂ ಹುಟ್ಟುವುದು ಹೇಗೆ? ಇದಕ್ಕಾಗಿ ಕೆಲವರು ತನ್ನಷ್ಟಕ್ಕೆ ತಾನೇ ಸ್ವಂತ ಸೂಚನೆಗಳನ್ನು (Auto-suggestions) ಕೊಟ್ಟುಕೊಳ್ಳಬೇಕೆಂದು ಹೇಳುತ್ತಾರೆ. ಈ ಸಂದರ್ಭದಲ್ಲಿ ಮಂತ್ರಯಂತ್ರ, ಪ್ರಾರ್ಥನೆ, ಧ್ಯಾನ ಮೊದಲಾದವುಗಳ ಪ್ರಯೋಜನವನ್ನು ಕಂಡುಕೊಳ್ಳಬಹುದಾಗಿದೆ. " ಎಲ್ಲವನ್ನೂ ದೇವರು ಮಾಡಿಸುವವನು; ಸರ್ವಾಂತರ್ಯಾಮಿ. ಅವನೇ ನಮ್ಮ ಬುದ್ಧಿಗೆ ಪ್ರೇರಕನು, ಚೋದಕನು, ನಿಯಾಮಕನು. ಅವನು ಹೇಗೆ ಪ್ರೇರಣೆ ಮಾಡುವನೋ ಹಾಗೆ ನಾವು ವರ್ತಿಸುವೆವು. ಅವನಿಗೆ ನಾನು ಸರ್ವ

ಭಾವದಿಂದ ಶರಣುಹೋಗಿದ್ದೇನೆ. ಅವನಿಗೆ ಅಸಾಧ್ಯವಾದುದು ಯಾವುದು ? ಅವನು ನಿಜವಾಗಿಯೂ ನನ್ನನ್ನು ಗುಣಪಡಿಸುವನು. ಅವನೇ ನನಗೆ ಸರಿಯಾದ ಮಾರ್ಗದರ್ಶನ ಮಾಡಲಿ. ನಾನು ಕ್ರಮೇಣ ಸುಧಾರಿಸುತ್ತ ನಡೆದಿದ್ದೇನೆ. ಕೆಲವು ದಿನಗಳಲ್ಲಿ ನಾನು ಪೂರ್ಣ ನೀರೋಗಿಯಾಗುವೆನು." ಈ ರೀತಿ ನಾವು ವಿಚಾರ ಮಾಡುತ್ತ ಹೋದರೆ ಅದರ ಪರಿಣಾಮವು ಅವಶ್ಯವಾಗಿ ಆಗುವುದು. ಇಚ್ಛಾಶಕ್ತಿ ಅಥವಾ ಸಂಕಲ್ಪಸಿದ್ಧಿಯೆಂಬುದು ಅನುಭವಸಿದ್ಧವಾಗಿದೆಯೆಂದು ಪಾಶ್ಚಾತ್ಯರೂ ಒಡಂಬಡುತ್ತಾರೆ.

ಬರ್ನದ ಡೂಬಾಯ್ (Dubois of Berne) ಎಂಬ ಪಂಡಿತನು ಇನ್ನೂ ಒಂದು ಸಾಧನವನ್ನು ಹೇಳುತ್ತಾನೆ. ಅದನ್ನು "ಮನಗಾಣಿಸುವ" (Persuasion) ರೀತಿಯೆಂದು ಕರೆಯಬಹುದು. ಸೂಚನಾಕ್ರಮದಲ್ಲಿ ನ್ಯಾಯಬದ್ಧವಾದ ವಿಚಾರಸರಣಿ ಇರುವುದಿಲ್ಲ. ಆದರೆ ಈ ಪದ್ಧತಿಯಲ್ಲಿ ನ್ಯಾಯ ಅಥವಾ ತರ್ಕಶಾಸ್ತ್ರದ ನಿಯಮಗಳಿಗನುಗುಣವಾಗಿ ಸಾರಾಸಾರಪೂರ್ವಕವಾಗಿ ವಿಚಾರ ಮಾಡಿ ಮನಗಾಣಬೇಕಾಗುವುದು. ತನ್ನ ಮನೋರೋಗಗಳಿಗೆ ತರ್ಕಶುದ್ಧವಾದ ಯಾವ ಯೋಗ್ಯ ಕಾರಣಗಳೂ ಇಲ್ಲವೆಂಬುದು ಅವನಿಗೆ ಮನವರಿಕೆಯಾದೊಡನೆ, ಮನೋರೋಗದ ಪ್ರಾಬಲ್ಯವು ಕಡಿಮೆಯಾಗುವುದು. ಆದರೆ ಈ ಸಾಧನದ ಉಪಯುಕ್ತತೆಯು ಬಹಳ ವಿವಾದಾಸ್ಪದವಾಗಿದೆ. ಏಕೆಂದರೆ ಎಷ್ಟೋ ರೋಗಿಗಳಿಗೆ ತಮ್ಮ ನಡತೆಯು ಅಯೋಗ್ಯವಾಗಿರುವುದೆಂಬುದು ಸ್ಪಷ್ಟವಾಗಿ

ಗೊತ್ತಾಗುತ್ತಿದ್ದರೂ ಅದರ ಹಿಡಿತವನ್ನು ಅವರು ತಪ್ಪಿಸಿಕೊಳ್ಳ ಲಾರದವರಾಗಿರುತ್ತಾರೆ.

ಕೊನೆಯದಾಗಿ ಮನೋರೋಗಕ್ಕೆ ಪರಿಹಾರವೆಂದು ಕೆಲವು ಹೊಸ ಹೊಸ ಉದ್ಯೋಗಗಳನ್ನು ಕಲ್ಪಿಸಿಕೊಡ ಬಹುದು. ಮನೋರೋಗಿಗಳ ಮನಸ್ಸು ಯಾವುದಾದ ರೊಂದು ಕೆಲಸದಲ್ಲಿ ತೊಡಗುವಂತೆ ಮಾಡುವುದರಿಂದ ರೋಗದ ಬೆಳೆವಣಿಗೆಯನ್ನು ಸುಲಭವಾಗಿ ತಡೆಗಟ್ಟಬಹುದಾ ಗಿದೆ (Occupational therapy). ಈ ಪ್ರಸಂಗದಲ್ಲಿ ಫ್ರಾಯ್‌ಡನು ಒಬ್ಬ ರೋಗಿಗೆ ಮಾಡಿದ ಮಾರ್ಗದರ್ಶನವು ನೆನಪಿನಲ್ಲಿಡುವಂತಿದೆ. ಒಬ್ಬ ರೋಗಿಗೆ ಜನರನ್ನು ಗಾಯ ಗೊಳಿಸಬೇಕು, ಕೊಯ್ಯಬೇಕು ಎಂದು ಮೊದಲಾಗಿ ವಿಶೇಷ ವಾಗಿ ಎನಿಸುತ್ತಿತ್ತು. ಸಲಹೆ ಪಡೆಯಬೇಕೆಂದು ಅವನು ಫ್ರಾಯ್‌ಡನ ಕಡೆಗೆ ಬಂದನು. ಫ್ರಾಯ್‌ಡನು ಅವನಿಗೆ ಹೇಳಿದ್ದೇನಂದರೆ : “ ನೀನು ಶಸ್ತ್ರಚಿಕಿತ್ಸಾ ವಿದ್ಯೆಯ ಅಭ್ಯಾಸ ಮಾಡು. ಅಂದರೆ ನಿನ್ನಲ್ಲಿ ಜನರನ್ನು ಗಾಯಗೊಳಿಸಬೇ ಕೆಂದಿರುವ ಸ್ವಾಭಾವಿಕ ಪ್ರವೃತ್ತಿಗೆ ಸಂಪೂರ್ಣ ಆಸ್ಪದ ಸಿಕ್ಕುವುದಲ್ಲದೆ, ಸಮಾಜಕ್ಕೂ ಹಿತವಾಗುವುದು. ” ಆ ರೋಗಿಯು ಅದರಂತೆ ಮಾಡಿ, ಮುಂದೆ ಪ್ರಖ್ಯಾತನಾದ “ಸರ್ಜನ್” ( Surgeon ) ನಾದನು. ಉದಾತ್ತೀಕರಣದ ಉತ್ಕೃಷ್ಟವಾದ ಉದಾಹರಣೆಯೆಂದು ಇದನ್ನು ಅಭ್ಯಾಸ ಮಾಡುವಂತಿದೆ.

# ೬. ಉಪಸಂಹಾರ

ತಾತ್ಪರ್ಯವೇನೆಂದರೆ— ಜೀವನದಲ್ಲಿ ಬಂದ ಎಡರುಗಳನ್ನು ಸಾವಧಾನದಿಂದಲೂ ಧೈರ್ಯದಿಂದಲೂ ಎದುರಿಸಲಿಕ್ಕೆ ಕಲಿಯಬೇಕು. ಅವುಗಳಿಂದ ತಪ್ಪಿಸಿಕೊಂಡು ಓಡಿಹೋಗಬೇಕೆಂಬ ಪ್ರವೃತ್ತಿಯು ಎಂದೂ ತರವಲ್ಲ. ಇಲ್ಲದ ಮನೋರಾಜ್ಯಗಳನ್ನು ಕಲ್ಪಿಸಬಾರದು. ನಮ್ಮ ಯೋಗ್ಯತೆ ಮತ್ತು ಪರಿಸ್ಥಿತಿಗಳಿಗೆ ತಕ್ಕಂತೆ ಮಹತ್ವಾಕಾಂಕ್ಷೆಯನ್ನಿಟ್ಟುಕೊಳ್ಳಬೇಕು. ನಮ್ಮ ಆಶೆ ಆಕಾಂಕ್ಷೆಗಳ ಅರಿವನ್ನು ಮಾಡಿಕೊಳ್ಳಬೇಕು. ಅಂಜಿಕೆಯ ಭಾವನೆಯನ್ನು ಬೆಳಸುತ್ತ ಹೋಗಬಾರದು. ಎಲ್ಲದರಲ್ಲಿಯೂ ಸುವರ್ಣಮಧ್ಯವನ್ನು ಅನುಸರಿಸಬೇಕು. ಯಾವುದರಲ್ಲಿಯೂ ಅತಿರೇಕವು ತರವಲ್ಲ. ಅಪ್ಪಿತಪ್ಪಿ ಏನಾದರೂ ತಪ್ಪುತಡೆಗಳುಂಟಾಗಿದ್ದರೆ, ಅವುಗಳ ಬಗೆಗೆ ಬಹಳ ವಿಚಾರ ಮಾಡುತ್ತ ಕುಳ್ಳಿರಬಾರದು. “ನಾನು ಬಹಳ ಪಾಪಿಷ್ಠನು, ಅನ್ಯಾಯ ಮಾಡಿದ್ದೇನೆ” ಎಂಬ ಭಾವನೆಗೆ ಎಡೆಗೊಡಬಾರದು. ಮನೋವಿಕಾರಗಳನ್ನು ಸಿಕ್ಕಸಿಕ್ಕಂತೆ ಹತ್ತಿಕ್ಕಬಾರದು. ಅಥವಾ ಅವಕ್ಕೆ ಬಹಳ ಆಸ್ಪದ ಕೊಡಬಾರದು. ಒಂದಿಲ್ಲೊಂದು ತರದಿಂದ ಸಮಾಜ ಹಿತಕ್ಕಾಗಿ ದುಡಿಯುವ ಪ್ರಯತ್ನ ಮಾಡುತ್ತಿರಬೇಕು. ಭಗವ

ದ್ಗೀತಿಯ ಶಬ್ದಗಳಲ್ಲಿ ಹೇಳಬೇಕಾದರೆ “ ಆಹಾರ ವಿಹಾರ, ಕರ್ಮ, ನಿದ್ರೆ, ಎಚ್ಚರಿಕೆ ಮೊದಲಾದ ಜೀವನದ ಎಲ್ಲ ಅಂಗಗಳಲ್ಲಿ ಮನುಷ್ಯನು ಯೋಗ್ಯ ಮಾರ್ಗವನ್ನನುಸರಿಸಬೇಕು. ” ಹೀಗೆ ನಡೆಯುವವರು ಯಾವ ಮನೋರೋಗಕ್ಕೂ ಹೆದರಬೇಕಾಗಿಲ್ಲ.




## ಇತರ ಪ್ರಕಟನೆಗಳು

1. The Hindu Code Bill — Rs. 2
   - *Justice P. B. Gajendragadkar*
2. Introduction to Karnatak Mysticism — Re. 1
   - *Dr. R. D. Ranade*
3. Selections from the Mahabharata and the Ramayana — Rs. 3

೪. ಕಾವ್ಯಮಂಜರಿ - ಭಾಗ ೧ — ರೂ. ೧

೫. ಕಾವ್ಯಮಂಜರಿ - ಭಾಗ ೨ — ರೂ. ೧

೬. ಗದ್ಯಮಂಜರಿ — ರೂ. ೨

ಕರ್ನಾಟಕ ವಿಶ್ವವಿದ್ಯಾಲಯ

ಧಾ ರ ವಾ ಡ